ಮುಂಬಯಿ ಇಲಾಖೆಯ ವಿದ್ಯಾಖಾತೆಯವರು ಇದನ್ನು ಕನ್ನಡ ಪ್ರಾಥಮಿಕ ಶಾಲೆಗಳ
೪-೫ನೇ ಇಯತ್ತೆಗಳಲ್ಲಿ ಉಪಯೋಗಿಸುವ ಸಲುವಾಗಿ ಉಪಕ್ರಮಿಕ ಪುಸ್ತಕ
(Supplementary Reader)ವೆಂದು ಮಾನ್ಯಮಾಡಿರುತ್ತಾರೆ.

---

ಸಚಿತ್ರ

# ಬಾಲರಾಮಾಯಣ

೫ನೇ ಆವೃತ್ತಿ.

ಇದು

ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರಮಠ,
ಡಿಸ್ಟ್ರಿಕ್ಟ ಕೋರ್ಟ ಪ್ಲೀಡರ, ಧಾರವಾಡ

ಇವರಿಂದ ರಚಿತವಾಗಿ

ಮಂಗಳೂರ ಧರ್ಮಪ್ರಕಾಶ ಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.
ಹಾಗೂ ಧಾರವಾಡ ಚಂದ್ರೋದಯ ಮುದ್ರಣಕಾರ್ಯಾಲಯದಲ್ಲಿ
ಪ್ರಸಿದ್ಧಮಾಡಲ್ಪಟ್ಟಿತು

ಸನ್ನ ೧೯೨೯ ಅಗಷ್ಟ

# ೪ನೇ ಆವೃತ್ತಿಯ ಪ್ರಸ್ತಾವನೆ.

ರಾಮಾಯಣ ಮತ್ತು ಮಹಾಭಾರತಗಳು ನಮ್ಮ ರಾಷ್ಟ್ರೀಯ ಗ್ರಂಥಗಳಿದ್ದು ಇವುಗಳು ಅತ್ಯಂತ ಜ್ಞಾನಬೋಧಕವಾಗಿಯೂ, ಮನೋರಂಜಕವಾಗಿಯೂ ಇರುತ್ತವೆಂಬುವದನ್ನು ನಾನು ಹೊಸದಾಗಿ ಹೇಳಬೇಕಾಗಿಲ್ಲ. ನಾನು ಚಿಕ್ಕ ಮಕ್ಕಳ ಸಲುವಾಗಿ "ಬಾಲಭಾರತ" "ಬಾಲರಾಮಾಯಣ" ಮತ್ತು "ಬಾಲಭಾಗವತ" ಈ ಮೂರು ಪುಸ್ತಕಗಳನ್ನು ಪ್ರಸಿದ್ಧಮಾಡಿದ್ದೇನೆ ಈ ಮೂರೂ ಪುಸ್ತಕಗಳಲ್ಲಿ ನಾನು ಸುಂದರವಾದ ಚಿತ್ರಗಳನ್ನು ಕೊಟ್ಟದ್ದು ಇವುಗಳಲ್ಲಿಯ ಭಾಷೆಯನ್ನು ಚಿಕ್ಕ ಮಕ್ಕಳಿಗೆ ತಿಳಿಯುವಂತೆ ಸುಲಭವಾಗಿಯೂ ಸುಬೋಧವಾಗಿಯೂ ಬರೆಯಲಿಕ್ಕೆ ಪ್ರಯತ್ನಮಾಡಿರುತ್ತೇನೆ. ಈ ಮೂರೂ ಪುಸ್ತಕಗಳನ್ನು ಮುಂಬಯಿ ಇಲಾಖೆಯ ವಿದ್ಯಾಖಾತೆಯವರು ಇನಾಮಿನ ಪುಸ್ತಕಗಳೆಂತಲೂ, ಲೈಬ್ರರಿಯ ಪುಸ್ತಕಗಳೆಂತಲೂ ಮಂಜೂರು ಮಾಡಿರುವದಲ್ಲದೆ ಈಗ ಉಪಕ್ರಮಿಕ ಪುಸ್ತಕಗಳೆಂದು ಮಾನ್ಯಮಾಡಿರುವದರಿಂದ ನಾನು ಅವರಿಗೆ ತುಂಬಾ ಕೃತಜ್ಞನಾಗಿರುತ್ತೇನೆ. ಚಿಕ್ಕ ಮಕ್ಕಳು ಈ ಮೂರೂ ಪುಸ್ತಕಗಳನ್ನು ತಪ್ಪದೆ ಓದಿ ಜ್ಞಾನಲಾಭವನ್ನೂ ಮನೋರಂಜನವನ್ನೂ ಮಾಡಿಕೊಳ್ಳುವರೆಂದು ನಾನು ತುಂಬಾ ಆಶಿಸುತ್ತೇನೆ ಹಾಗೂ ಈ ಮೂರೂ ಪುಸ್ತಕಗಳನ್ನು ಓದುವದರಿಂದ ಸಣ್ಣ ಮಕ್ಕಳಿಗೆ ಮಾತ್ರವಲ್ಲದೆ ದೊಡ್ಡವರಿಗೂ ವಿಶೇಷ ಉಪಯೋಗವಾಗದೆ ಇರಲಾರದೆಂದು ನಾನು ಪೂರ್ಣವಾಗಿ ನಂಬುತ್ತೇನೆ.

ತಮ್ಮ ಪ್ರೇಮಾಭಿಲಾಷಿ,

ಧಾರವಾಡ,
ತಾ ೧೫ — ೮ — ೧೯೩೮

ಗ. ಹು. ಹೊನ್ನಾಪುರಮಠ,
ಗ್ರಂಥಕರ್ತ.

# ಅನುಕ್ರಮಣಿಕೆ.

# ಬಾಲರಾಮಾಯಣ.



## ೧. ಬಾಲಕಾಂಡ.

(ಇದರಲ್ಲಿ ಶ್ರೀರಾಮಚಂದ್ರನ ಮತ್ತು ಅವನ ಮೂರು ಮಂದಿ ತಮ್ಮಂದಿರ ಜನ್ಮ, ವಿದ್ಯಾಭ್ಯಾಸ, ವಿವಾಹ ಮುಂತಾದ ಅವರ ಬಾಲ್ಯದ ವರ್ಣನೆಯನ್ನು ಹೇಳಿರುವದರಿಂದ ಇದಕ್ಕ "ಬಾಲಕಾಂಡ" ಎಂಬ ಹೆಸರು ಬಂದಿರುವದು.)

ಶರಯೂ ನದಿಯ ತೀರದಲ್ಲಿ ಅಯೋಧ್ಯ ಎಂಬ ಪುರಾಣ ಪ್ರಸಿದ್ಧವಾದ ಒಂದು ದೊಡ್ಡ ರಾಜಧಾನಿಯು ಇರುವದು ಅಲ್ಲಿ ಬಹು ಪ್ರಾಚೀನ ಕಾಲದೊಳಗೆ ರಘು ಎಂಬ ಹೆಸರಿನ ಒಬ್ಬ ಸೂರ್ಯವಂಶದ ಅರಸನು ರಾಜ್ಯವಾಳುತ್ತಿದ್ದನು. ಅವನು ದೊಡ್ಡ ದೊಡ್ಡ ಯಜ್ಞಗಳನ್ನು ಮಾಡಿ ದೇವಾನುದೇವತೆಗಳನ್ನು ಸಹ ಸಂತುಷ್ಟಪಡಿಸಿದ್ದನು. ಅವನು ಬಹಳ ನ್ಯಾಯಶಾಲಿಯು ಇದ್ದಕಾರಣ ಎಲ್ಲರು ಅವನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅವನು ಬಹಳ ಪುಣ್ಯಶಾಲಿಯೂ ಪರಾಕ್ರಮಿಯೂ ಇದ್ದನು. ಅವನ ಮಗನಾದ ಅಜನು ಸಹ ಬಹಳ ಪರಾಕ್ರಮಿಯು ಇದ್ದನು. ಅಜನ ಮಗನಾದ ದಶರಥನಾದರೂ ಬಹಳ ನ್ಯಾಯಶಾಲಿಯೂ ಪರಾಕ್ರಮಿಯೂ ಇದ್ದನು. ಆದರೆ ಅವನಿಗೆ ಸಂತಾನವು ಏನೂ ಇದ್ದಿಲ್ಲ. ಆದುದರಿಂದ ಅವನು ಅನೇಕ ಯಜ್ಞಯಾಗಾದಿ ಪುಣ್ಯಕರ್ಮಗಳನ್ನು ಮಾಡಿದನು ಈ ಪುಣ್ಯಕರ್ಮಗಳ ಸಾಮರ್ಥ್ಯದಿಂದ ಅವನಿಗೆ ಅವನ ಕುಲಕ್ಕೆ ಭೂಷಣಪ್ರಾಯರಾದ ನಾಲ್ಕು ಮಂದಿ ಮಕ್ಕಳು

ಹುಟ್ಟಿದರು. ದಶರಥನಿಗೆ ಮೂರು ಮಂದಿ ರಾಣಿಯರಿದ್ದರು. ಅವ ರಲ್ಲಿ ಹಿರಿಯಳಾದ ಕೌಸಲ್ಯೆಯ ಹೊಟ್ಟೆಯಿಂದ ರಾಮನು ಹುಟ್ಟಿ ದನು. ಈ ಅತಿ ಪರಾಕ್ರಮಿಯಾದ ರಾಮನು ಚೈತ್ರ ಶುದ್ಧ ನವ ಮಿಯ ದಿವಸ ಮಧ್ಯಾಹ್ನದ ೧೨ ಘಂಟೆಗೆ ಹುಟ್ಟಿದನು. ಆ ಸಮ ಯಕ್ಕೆ ರಾಜನಿಗೆ ಉತ್ತಮವಾದ ಶಕುನಗಳು ಆದವು. ಹಾಗೂ ಈ ಮಗನಿಂದ ತನ್ನ ಕುಲದ ಕೀರ್ತಿಯು ದಿಗಂತರವಾಗಿ ಬೆಳೆಯುವ ದೆಂಬ ಚಿನ್ಹಗಳು ರಾಜನಿಗೆ ಸ್ಪಷ್ಟವಾಗಿ ಕಂಡುಬಂದವು. ಎರ ಡನೆ ರಾಣಿಯಾದ ಸುಮಿತ್ರೆಯಿಂದ ಲಕ್ಷ್ಮಣ ಮತ್ತು ಶತ್ರುಘ್ನರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಹಾಗೂ ಚಿಕ್ಕರಾಣಿಯಾದ ಕೈಕೆ ಯಿಯಿಂದ ಭರತನೆಂಬ ಮಗನು ಹುಟ್ಟಿದನು. ಈ ಮೂರು ಮಂದಿ ಮಕ್ಕಳು ಸಹ ರಾಮನಂತೆ ಸುಸ್ವರೂಪರೂ ಸುಲಕ್ಷಣಿ ಗಳೂ ಇದ್ದರು ಈ ಯಾವತ್ತು ಮಕ್ಕಳ ಜನ್ಮದ ಕಾಲಕ್ಕ ರಾಜ ನು ಬಹಳ ಉಲ್ಹಾಸದಿಂದ ದೊಡ್ಡ ಉತ್ಸವವನ್ನು ಮಾಡಿದನು. ರಾಮಜನ್ಮದ ಉತ್ಸವವು ಈಗಲೂ ಜನರೊಳಗೆ ಪ್ರಚಾರದಲ್ಲಿ ಇರುವದು ಈ ನಾಲ್ಕು ಮಂದಿ ಮಕ್ಕಳ ಜನ್ಮದಿಂದ ದಶರಥ ರಾಜನಿಗೂ ಅವನ ಪ್ರಜೆಗಳಿಗೂ ಬಹಳ ಆನಂದವುಂಟಾಯಿತೆಂದು ಹೇಳಲವಶ್ಯವಿಲ್ಲ.

ಮಕ್ಕಳು ದಿನದಿನಕ್ಕೆ ದೊಡ್ಡವರಾಗಹತ್ತಲು, ಅವರ ಬಾಲ ಕ್ರೀಡೆಯನ್ನು ನೋಡಿ ರಾಜನಿಗೂ ರಾಣಿಯರಿಗೂ ಬಹಳ ಆನಂದ ವಾಯಿತು. ಲಕ್ಷ್ಮಣನು ರಾಮನನ್ನು ಅಗಲಿ ಒಂದು ಕ್ಷಣಹೊತ್ತು ಸಹ ಇರುತ್ತಿದ್ದಿಲ್ಲ. ರಾಮನ ಮೇಲೆ ಲಕ್ಷ್ಮಣನ ಪ್ರೀತಿಯು ಬಹ ಳವಿತ್ತು. ಭರತನನ್ನು ಅಗಲಿ ಶತ್ರುಘ್ನನು ಸಹ ಎಂದೂ ಇರುತ್ತಿ ದ್ದಿಲ್ಲ. ಈ ಪ್ರಕಾರ ಇಬ್ಬಿಬ್ಬರು ಜೊತೆಯಾಗಿ ಇರುತ್ತಿದ್ದರು.

ಆದರೂ ನಾಲ್ಕೂ ಮಂದಿ ಅಣ್ಣತಮ್ಮಂದಿರು ತಮ್ಮತಮ್ಮೊಳಗೆ ಬಹಳ ಪ್ರೀತಿಯಿಂದ ಇರುತ್ತಿದ್ದರು. ಈ ನಾಲ್ಕೂ ಮಂದಿ ಮಕ್ಕಳು ದೊಡ್ಡವರಾದ ಬಳಿಕ ವಸಿಷ್ಠ ಗುರುಗಳು ಅವರಿಗೆ ಉಚಿತವಾದ ಶಿಕ್ಷಣವನ್ನು ಕೊಟ್ಟರು. ಇವರೆಲ್ಲರು ಕುದುರೆಗಳ ಮೇಲೂ ಆನೆಗಳ ಮೇಲೂ ಕುಳಿತುಕೊಳ್ಳುವದನ್ನು ಕಲಿತು, ಧನುಷ್ಯಗಳಿಂದ ಬಾಣಬಿಡುವದರಲ್ಲಿ ಸಹ ನಿಷ್ಣಾತರಾದರು ಇವರೆಲ್ಲರು ವಿದ್ಯಾರ್ಜನೆಯಲ್ಲಿ ತೊಡಗಿದರೂ ತಮ್ಮ ಮಾತಾಪಿತೃಗಳ ಸೇವೆಯನ್ನು ಮಾಡುವಲ್ಲಿ ಕಿಂಚಿತ್ತಾದರೂ ಕಡಿಮೆ ಮಾಡಲಿಲ್ಲ. ರಾಮಚಂದ್ರನ ಸೇವೆಯನ್ನು ಲಕ್ಷ್ಮಣನು ಬಹಳ ಪ್ರೇಮದಿಂದಲೂ ಭಕ್ತಿಯಿಂದಲೂ ಮಾಡುತ್ತಿದ್ದನು. ರಾಮಚಂದ್ರನು ಬೇಟೆಯನ್ನಾಡುವದಕ್ಕಾಗಿ ಅರಣ್ಯಕ್ಕೆ ಕುದುರೆಯ ಮೇಲೆ ಕುಳಿತು ಹೋದಾಗ ಲಕ್ಷ್ಮಣನು ಅವನ ಹಿಂದೆ ಅವನ ಧನುರ್ಬಾಣಗಳನ್ನು ಹೊತ್ತುಕೊಂಡು ಪಾದಚಾರಿಯಾಗಿ ಹೋಗುತ್ತಿದ್ದನು. ಈ ಹುಡುಗರು ದೊಡ್ಡವರಾಗಿ ಬೆಳೆಯುತ್ತ ನಡೆಯಲು, ಜನರು ಅವರ ವಿದ್ಯೆ-ವಿನಯ-ಸುರೂಪ-ಸೌಜನ್ಯಗಳನ್ನು ನೋಡಿ ಅವರನ್ನು ಬಹಳ ಪ್ರೀತಿಮಾಡಲಾರಂಭಿಸಿದರು. ಅವರು ಅರಸುಮಕ್ಕಳಾದಾಗ್ಯೂ ಎಳ್ಳಷ್ಟಾದರೂ ಸೊಕ್ಕುಮಾಡದೆ, ತಮ್ಮ ಪ್ರಜೆಗಳ ಮತ್ತು ಸೇವಕರ ಕೂಡ ಬಹಳ ಪ್ರೀತಿಯಿಂದ ನಡೆಯುತ್ತಿದ್ದರು. ದಶರಥರಾಜನು ತನ್ನ ಸದ್ಗುಣಿ ಮತ್ತು ಸುಂದರ ಹುಡುಗರನ್ನು ನೋಡಿ ಅತ್ಯಂತ ಆನಂದಪಡುತ್ತಿದ್ದನು

ಅವರು ಓದುಬರಹ, ಶಸ್ತ್ರಾಸ್ತ್ರವಿದ್ಯೆ ಮುಂತಾದ ಯಾವತ್ತು ತರದ ಜ್ಞಾನಪ್ರಾಪ್ತಿಯನ್ನು ಮಾಡಿಕೊಂಡದ್ದಲ್ಲದೆ ತಮ್ಮ ಶರೀರಸಾಮರ್ಥ್ಯವನ್ನು ಚೆನ್ನಾಗಿ ಬೆಳೆಸಿದರು. ಅವರು ವಯ

ಸ್ಸಿನಿಂದ ಚಿಕ್ಕವರಾದಾಗ್ಯೂ ತಮ್ಮ ಶೌರ್ಯದ ಕೀರ್ತಿಯಿಂದ ತಮ್ಮ ಶತ್ರುಗಳನ್ನು ಭಯಗೊಳಿಸಿದರು. ಅವರು ೧೫ ವರ್ಷದವರಾದಾಗ ತಮ್ಮ ವಯಸ್ಸಿನ ಮರ್ಯಾದೆಯಿಂದ ಬಹಳೇ ವಿದ್ಯೆಯನ್ನು ಸಂಪಾದನ ಮಾಡಿದರು. ರಾಜನಂತೂ ಅವರನ್ನು ತನ್ನ ಜೀವದಕಿಂತ ಹೆಚ್ಚು ಪ್ರೀತಿಸುತ್ತಿದ್ದನು.

ಒಂದಾನೊಂದು ದಿವಸ ದಶರಥರಾಜನು ಆನಂದದಿಂದ ತನ್ನ ಓಲಗದಲ್ಲಿ ಸ್ವಸ್ಥಚಿತ್ತನಾಗಿ ಕುಳಿತುಕೊಂಡಿರಲು, ವಿಶ್ವಾಮಿತ್ರ ಋಷಿಯು ಅವನ ಕಡೆಗೆ ಬಂದನು ಆಗ ರಾಜನು ವಿಶ್ವಾಮಿತ್ರ ಋಷಿಯನ್ನು ನೋಡಿದವನೇ ಅವನಿಗೆ ಸುಸ್ವಾಗತವನ್ನು ಮಾಡಿ, ಅವನನ್ನು ಯೋಗ್ಯ ಆಸನದ ಮೇಲೆ ಕುಳ್ಳಿರಿಸಿ, ಅವನ ಮುಂದೆ ಕೈಜೋಡಿಸಿಕೊಂಡು ನಿಂತನು. ಬಳಿಕ ಅವನು ಯಾವತ್ತು ಪೂಜಾಸಾಹಿತ್ಯಗಳನ್ನು ತರಿಸಿ, ಆ ಋಷಿಯನ್ನು ಪೂಜಿಸಿ—"ಭಗವನ್! ತಮ್ಮ ಯಾವತ್ತು ನಿತ್ಯಕರ್ಮಗಳು ನಿರ್ವಿಘ್ನದಿಂದ ನಡೆದಿರುತ್ತವಷ್ಟೇ? ತಮಗೆ ಯಾರಿಂದಲೂ ಉಪದ್ರವವಾಗುವದಿಲ್ಲವಷ್ಟೇ? ತಾವು ಈ ಹೊತ್ತು ನನಗೆ ಅಕಸ್ಮಾತ್ತಾಗಿ ದರ್ಶನಕೊಟ್ಟು ನನ್ನ ಮೇಲೆ ಅನುಗ್ರಹಮಾಡಿದ್ದಕ್ಕಾಗಿ ನಾನು ಆನಂದಸಾಗರದಲ್ಲಿ ಮುಳುಗಿರುತ್ತೇನೆ. ತಮ್ಮಂಥ ಮಹರ್ಷಿಗಳು ನನ್ನ ಸ್ಥಳಕ್ಕೆ ಕರೆಯಿಸಿಕೊಳ್ಳದೆ ಬಂದದ್ದು ನನ್ನ ಭಾಗ್ಯೋದಯವೇ ಸರಿ ತಮ್ಮ ಅಪೇಕ್ಷೆಯು ಏನಿರುತ್ತದೆಂಬದನ್ನು ನಿಶ್ಶಂಕವೃತ್ತಿಯಿಂದ ನನಗೆ ಆಜ್ಞಾಪಿಸಬೇಕು" ಎಂದು ನುಡಿದನು ರಾಜನ ಭಾಷಣವನ್ನು ಕೇಳಿ, ವಿಶ್ವಾಮಿತ್ರನು:—"ರಾಜನೇ, ನೀನು ಮಾಡಿದ ಸತ್ಕಾರದಿಂದಲೂ ನಿನ್ನ ವಿನಯದಿಂದಲೂ ನನಗೆ ಬಹಳ ಸಂತೋಷವಾಯಿತು. ನೀನು ನನಗೆ ನನ್ನ ನಿತ್ಯಕರ್ಮಗಳು

ನಿರ್ವಿಘ್ನದಿಂದ ನಡಿದಿರುತ್ತವೋ ಎಂಬದಾಗಿ ಕೇಳಿದ ಪ್ರಶ್ನೆಗೆ ನನ್ನ ಉತ್ತರವನ್ನು ಚಿತ್ತಗೊಟ್ಟು ಲಾಲಿಸು. ನನ್ನ ಆಶ್ರಮದಲ್ಲಿ ರಾಕ್ಷಸರ ಉಪದ್ರವವು ಬಹಳವಾಗಿರುತ್ತದೆ. ಅವರು ನನಗೆ ನನ್ನ ಯಜ್ಞಯಾಗಾದಿಪುಣ್ಯಕರ್ಮಗಳನ್ನು ನೆರವೇರಿಸಗೊಡುವದಿಲ್ಲ. ಅವರು ನನ್ನ ಆಶ್ರಮದ ಮಾರ್ಗದಲ್ಲಿ ಅಪವಿತ್ರ ಪದಾರ್ಥಗಳನ್ನು ಚೆಲ್ಲಿ ನನಗೆ ಬಹಳ ಉಪದ್ರವ ಕೊಡುತ್ತಾರೆ. ಈ ರಾಕ್ಷಸರ ಕಾಟವನ್ನು ತಪ್ಪಿಸುವದಕ್ಕಾಗಿ ನಿನ್ನ ಮಕ್ಕಳಾದ ರಾಮಲಕ್ಷ್ಮಣರನ್ನು ನನ್ನ ಸಂಗಡ ಕಳುಹಿಸು ಅಂದರೆ ಅವರು ರಾಕ್ಷಸರನ್ನು ಸಂಹರಿಸಿ, ನಾನು ಮಾಡುವ ಯಜ್ಞಯಾಗಾದಿಗಳನ್ನು ನೆರವೇರಿಸಲಿಕ್ಕೆ ನನಗೆ ತುಂಬಾ ಸಹಾಯಕರಾಗುವರು. ನಿನ್ನ ಈ ಇಬ್ಬರು ಮಕ್ಕಳನ್ನು ಕರೆದುಕೊಂಡುಹೋಗುವದಕ್ಕಾಗಿ ನಾನು ನಿನ್ನ ಬಳಿಗೆ ಬಂದಿದ್ದೇನೆ. ಈ ನನ್ನ ಮನೋರಥವನ್ನು ಪೂರ್ಣ ಮಾಡು" ಎಂದು ಹೇಳಿದನು.

ವಿಶ್ವಾಮಿತ್ರನ ಈ ಭಾಷಣವನ್ನು ಕೇಳಿ ರಾಜನಿಗೆ ಬಹಳ ವ್ಯಸನವಾಯಿತು ವೃದ್ಧನಾದ ದಶರಥನಿಗೆ ಮಕ್ಕಳ ವಿಯೋಗವು ಒಂದು ಕ್ಷಣಸಹ ಸಹನವಾಗುತ್ತಿದ್ದಿಲ್ಲ. ಅಂದಮೇಲೆ ಬಹಳ ದಿವಸಗಳ ತನಕ ವಿಯೋಗವಾಗುವದು ಅವನಿಗೆ ಹೇಗೆ ಸಹನವಾಗಬೇಕು? ಆದುದರಿಂದ ರಾಜನು ವಿಶ್ವಾಮಿತ್ರನಿಗೆ–"ಭಗವನ್! ನನಗೆ ನನ್ನ ಪ್ರಾಣಕ್ಕಿಂತ ಹೆಚ್ಚು ಪ್ರಿಯಕರರಾಗಿರುವ ಮಕ್ಕಳನ್ನು ನೀವು ದಯಮಾಡಿ ಅರಣ್ಯಕ್ಕೆ ಕರೆದುಕೊಂಡು ಹೋಗಬೇಡಿರಿ. ದೂರ ನಡೆಯುವ ಕಷ್ಟವನ್ನೂ, ತೀಕ್ಷ್ಣವಾದ ಬಿಸಲಿನ ತಾಪವನ್ನೂ, ಅನ್ನನೀರಿನ ಅವ್ಯವಸ್ಥೆಯನ್ನೂ ತಡೆಯುವದು ನನ್ನ ಸುಕುಮಾರರಿಂದ ಹೇಗೆ ಆದೀತು? ಇದಲ್ಲದೆ ರಾಕ್ಷಸರ ಮುಂದೆ

ಅವರ ಆಟವು ಏನು ನಡೆದೀತು? ಅವರು ಇನ್ನೂ ಹಸುಗೂಸುಗಳಿ ರುತ್ತಾರೆ ಬೇಕಾದರೆ ನಾನೇ ತಮ್ಮ ಸಂಗಡ ಬರುತ್ತೇನೆ. ನಾನು ರಾಕ್ಷಸರನ್ನು ಸಂಹರಿಸಿ, ತಮ್ಮ ಯಜ್ಞಯಾಗಾದಿಗಳನ್ನು ರಕ್ಷಣ ಮಾಡುವೆನು" ಎಂದು ಹೇಳಿದನು. ರಾಜನ ಈ ಭಾಷಣವನ್ನು ಕೇಳಿ, ವಿಶ್ವಾಮಿತ್ರನಿಗೆ ಬಹಳ ಸಿಟ್ಟುಬಂದಿತು ಅವನು ಕೂಡಲೆ ತಾನು ಕುಳಿತ ಸ್ಥಳವನ್ನು ಬಿಟ್ಟು ಎದ್ದು—"ರಾಜನೇ! ನೀನು ಮೂರ್ಖನಿರುತ್ತೀ ನೀನು ನಿನ್ನ ಹಸುಗೂಸುಗಳನ್ನುಮನೆಯಲ್ಲಿ ಇಟ್ಟುಕೊಂಡು ಸ್ವಸ್ಥವಾಗಿ ಕುಳಿತುಕೋ ನಾನು ನನ್ನ ಮನೋ ರಥವನ್ನು ಅನ್ಯ ಯಾವನಾದರೂ ರಾಜನ ಕಡೆಯಿಂದ ನೆರವೇರಿಸಿ ಕೊಳ್ಳುವೆನು" ಎಂದು ನುಡಿದು ಕೋಪದಿಂದ ಹೊರಟು ಹೋಗ ಹತ್ತಿದನು. ಆಗ ರಾಜನು ಅವನನ್ನು ತಡೆದು—"ನಾನು ಇನ್ನು ಹೇಗೆ ಮಾಡಬೇಕು?" ಎಂದು ತನ್ನ ಗುರುಗಳಾದ ವಸಿಷ್ಠರಿಗೆ ಕೇಳಿದನು. ಅದಕ್ಕೆ ವಸಿಷ್ಠರು ಅವನಿಗೆ—"ನೀನು ನಿನ್ನ ಮಕ್ಕಳನ್ನು ವಿಶ್ವಾ ಮಿತ್ರನ ಸಂಗಡ ಕಳುಹಿಸಿಕೊಡುವದರಿಂದ ಎಲ್ಲರದೂ ಕಲ್ಯಾಣವಾ ಗುವದು" ಎಂದು ಹೇಳಿದರು. ಆ ಬಳಿಕ ರಾಜನು ತನ್ನ ಮಕ್ಕಳನ್ನು ವಿಶ್ವಾಮಿತ್ರನ ಸಂಗಡ ಅರಣ್ಯಕ್ಕೆ ಕಳುಹಿಸಿಕೊಡಲು ಸಿದ್ಧನಾದನು. ರಾಜನು ತನ್ನ ಅಪೇಕ್ಷೆಯಂತೆ ತನ್ನ ಸಂಗಡ ರಾಮಲಕ್ಷ್ಮಣರನ್ನು ಕಳುಹಿಸಿಕೊಡಲಿಕ್ಕೆ ಸಿದ್ಧನಾದುದನ್ನು ಕಂಡು ವಿಶ್ವಾಮಿತ್ರನಿಗೆ ಬಹಳ ಆನಂದವಾಯಿತು. ಆಗ ಅವನು ದಶರಥನಿಗೆ—"ನಿನಗೆ ಕಲ್ಯಾಣವಾ ಗಲಿ" ಎಂದು ಆಶೀರ್ವಾದಕೊಟ್ಟು, ಆ ಹುಡುಗರನ್ನು ತನ್ನ ಸಂಗಡ ಕರೆದುಕೊಂಡು ತನ್ನ ಆಶ್ರಮದ ಕಡೆಗೆ ಬರುವದಕ್ಕ ಹೊರಟನು.

ಬಳಿಕ ಆ ಮೂರೂ ಜನರು ದಾರಿಯೊಳಗೆ ಅರಣ್ಯದ ಶೋಭೆ ಯನ್ನು ನೋಡುತ್ತ ಹೊರಟರು. ಅವರು ಶರಯೂ ನದಿಯ

ಮೇಲೆ ಬಂದ ತರುವಾಯ ವಿಶ್ವಾಮಿತ್ರನು ರಾಮುನಿಗೆ ಬಲ ಮತ್ತು ಅತಿಬಲ ಎಂಬ ವಿದ್ಯೆಯನ್ನು ಕಲಿಸಿದನು ಮುಂದೆ ಅವರು ಸಂಚರಿಸುತ್ತ ಒಂದು ಭಯಂಕರವಾದ ಅರಣ್ಯದೊಳಗೆ ಬಂದರು. ಆ ಅರಣ್ಯದಲ್ಲಿ ಸುಂದನ ಹೆಂಡತಿಯಾದ ತಾಟಕಾ ಎಂಬ ಒಬ್ಬ ಮಹಾದುಷ್ಟ ರಾಕ್ಷಸಿಯು ಇರುತ್ತಿದ್ದಳು. ಆ ರಾಕ್ಷಸಿಯಿಂದ ಯಾವತ್ತು ಜನರಿಗೆ ಬಹಳ ತಾಪವಾಗಿತ್ತು. ಆ ರಾಕ್ಷಸಿಯನ್ನು ಕೊಲ್ಲಲಿಕ್ಕ ವಿಶ್ವಾಮಿತ್ರನು ರಾಮುನಿಗೆ ಆಜ್ಞಾಪಿಸಲು, ರಾಮುನು ತತ್ಕಾಲವೇ ತನ್ನ ಧನುರ್ಬಾಣಗಳಿಂದ ಅವಳನ್ನು ಸಂಹರಿಸಿದನು. ಇದರಿಂದ ಆ ಅರಣ್ಯವು ನಿರ್ಭಯವಾಗಲು ದೇವತೆಗಳೂ ಮನುಷ್ಯರೂ ಬಹಳ ಆನಂದಪಟ್ಟರು

ಆ ಮೇಲೆ ಈ ಮೂರರೂ ಜನರು ಮಾರ್ಗಕ್ರಮಣಮಾಡುತ್ತ ವಿಶ್ವಾಮಿತ್ರನ ಆಶ್ರಮಕ್ಕೆ ಬಂದರು. ಅಲ್ಲಿ ರಾಮನು ವಿಶ್ವಾಮಿತ್ರನ ಯಜ್ಞಕ್ಕೆ ವಿಘ್ನಮಾಡುವ ರಾಕ್ಷಸರಾದ ಮಾರೀಚ ಮತ್ತು ಸುಬಾಹು ಇವರಿಬ್ಬರ ಸಂಗಡ ಯುದ್ಧಮಾಡಿದನು ಹಾಗೂ ಆ ಯುದ್ಧದಲ್ಲಿ ರಾಮನು ಮಾರೀಚನನ್ನು ಓಡಿಸಿ, ಸುಬಾಹುವನ್ನು ಕೊಂದುಬಿಟ್ಟನು. ಇದರಿಂದ ವಿಶ್ವಾಮಿತ್ರನ ಯಜ್ಞಕಾರ್ಯವು ನಿರ್ವಿಘ್ನವಾಗಿ ಕೊನೆಗಂಡಿತು. ಇದಕ್ಕಾಗಿ ವಿಶ್ವಾಮಿತ್ರನಿಗೆ ಬಹಳ ಆನಂದವಾಯಿತು.

ಮುಂದೆ ವಿಶ್ವಾಮಿತ್ರನ ಯಜ್ಞಕಾರ್ಯವು ಸಮಾಪ್ತವಾದ ಬಳಿಕ ಅವನು ಜನಕರಾಜನ ಮಿಥಿಲಾ ಎಂಬ ಹೆಸರುಳ್ಳ ರಾಜಧಾನಿಯ ಕಡೆಗೆ ಹೋಗಲಿಕ್ಕೆ ಹೊರಟನು. ಅಲ್ಲಿ ಜನಕರಾಜನು ಯಜ್ಞವನ್ನು ಮಾಡತಕ್ಕವನಿದ್ದನು. ಆ ಯಜ್ಞಕಾರ್ಯಕ್ಕಾಗಿ ಜನಕರಾಜನು ವಿಶ್ವಾಮಿತ್ರನಿಗೆ ಆಮಂತ್ರಣವನ್ನು ಕಳುಹಿಸಿದ್ದನು. ಆದುದ

ರಿಂದ ವಿಶ್ವಾಮಿತ್ರನು ಅಲ್ಲಿಗೆ ಹೋಗುವಾಗ ತನ್ನ ಸಂಗಡ ರಾಮ ಲಕ್ಷ್ಮಣರಿಬ್ಬರನ್ನೂ ಕರೆದುಕೊಂಡು ಹೋದನು.

ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಮಿಥಿಲಾ ರಾಜಧಾನಿಗೆ ಕರೆದುಕೊಂಡು ಹೋಗುವಾಗ ಮಾರ್ಗದಲ್ಲಿ ಅವರ ಮನೋರಂಜನವನ್ನು ಮಾಡುವದಕ್ಕಾಗಿ ಅವರಿಗೆ ಅನೇಕ ಕಥೆಗಳನ್ನು ಹೇಳಿದನು ಅವುಗಳನ್ನು ಹೇಳುವಾಗ ಅವನು ಜನಕರಾಜನ ಬಳಿಯಲ್ಲಿರುವ ಶಿವಧನುಷ್ಯವನ್ನು ಕುರಿತು ಒಂದು ಕಥೆಯನ್ನು ಹೇಳಿದನು. ಆ ಕಥೆಯನ್ನು ಕೇಳಿ, ಆ ತರುಣ ರಾಜಕುಮಾರರಿಗೆ ಆ ಧನುಷ್ಯವನ್ನು ನೋಡುವ ಉತ್ಕಂಠತೆಯು ಉಂಟಾಯಿತು. ಈ ಮೂವರು ಮಿಥಿಲಾ ರಾಜಧಾನಿಗೆ ಹೋಗಿ ಮುಟ್ಟುವ ಮುಂಚೆ ಅವರಿಗೆ ದಾರಿಯಲ್ಲಿ ಗೌತಮ ಋಷಿಯ ಆಶ್ರಮವು ಹತ್ತಿತು. ಅಲ್ಲಿ ಆ ಋಷಿಯ ಸುಂದರ ಹೆಂಡತಿಯಾದ ಅಹಲ್ಯಾ ಇವಳಿಗೆ ಇಂದ್ರನು ಗೌತಮ ಋಷಿಯ ಕಪಟವೇಷವನ್ನು ಧರಿಸಿಕೊಂಡು ಬಂದು ವಂಚಿಸಿದ್ದರಿಂದ ಗೌತಮನು ಇಂದ್ರನಿಗೂ ಅಹಲ್ಯಾ ಇವಳಿಗೂ ಶಾಪವನ್ನು ಕೊಟ್ಟಿದ್ದನು. ಆದುದರಿಂದ ಅಹಲ್ಯಾ ಇವಳು ತನ್ನ ಪತಿಯ ಶಾಪದ ಮೂಲಕ ಅಲ್ಲಿ ಶಿಲೆ (ಕಲ್ಲು) ಆಗಿ ಬಿದ್ದುಕೊಂಡಿದ್ದಳು. ಆ ಕಲ್ಲಿಗೆ ರಾಮನ ಕಾಲು ಹತ್ತಿದ ಕೂಡಲೆ ಅವಳು ಪುನಃ ಸ್ತ್ರೀರೂಪವನ್ನು ಹೊಂದಿ, ತನ್ನ ಉದ್ಧಾರವು ರಾಮನಿಂದಾಯಿತೆಂದು ಅವನ ಉಪಕಾರವನ್ನು ಸ್ಮರಿಸುವದಕ್ಕಾಗಿ ಅವನಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಮಾಡಿದಳು. ಬಳಿಕ ಇವರೆಲ್ಲರು ಮಿಥಿಲೆಗೆ ಬಂದರು. ಅಲ್ಲಿ ಜನಕರಾಜನ ಯಜ್ಞಸಮಾರಂಭವು ನಡೆದಿತ್ತು. ಅದು ಮುಗಿದ ಬಳಿಕ ವಿಶ್ವಾಮಿತ್ರನು ಜನಕರಾಜನಿಗೆ—"ಜನಕರಾಜನೇ, ನೀನು ನಿನ್ನ ಮಗಳಾದ ಸೀತೆಯ ವಿವಾಹ



ರಾಮನು ಶಿವಧನುಷ್ಯಕ್ಕೆ ಹೆದೆಯನ್ನೇರಿಸುವದಕ್ಕೋಸ್ಕರ ಅದನ್ನು ಬಾಗಿಸಲಾಗಿ ಅದು ಮುರಿದು ಚೂರು ಚೂರಾಯಿತು.

(ಪುಟ ೯)

C. P. D.

ವನ್ನು ಮಾಡತಕ್ಕವನಿದ್ದು ನಿನ್ನಲ್ಲಿರುವ ಶಿವಧನುಸ್ಸ್ಯವನ್ನು ಎತ್ತು ವವರಿಗೆ ಅವಳನ್ನು ಕೊಡಬೇಕೆಂದು ನಿಶ್ಚಯಮಾಡಿರುವದಾಗಿ ಕೇಳುತ್ತೇನೆ. ಈ ಶಿವಧನುಸ್ಸ್ಯವನ್ನು ನೋಡಲಿಕ್ಕೂ ನಿನ್ನ ಈ ಯಜ್ಞಸಮಾರಂಭವನ್ನು ನೋಡಲಿಕ್ಕೂ ದಶರಥರಾಜನ ಮಕ್ಕಳಾದ ರಾಮಲಕ್ಷ್ಮಣರು ನನ್ನ ಸಂಗಡ ಬಂದಿರುತ್ತಾರೆ. ರಾಮನಿಗೆ ಆ ಧನುಸ್ಸ್ಯವನ್ನು ಎತ್ತಲಿಕ್ಕೆ ಬರುತ್ತದೆ. ಅದನ್ನು ಇಲ್ಲಿ ತರಿಸು, ನೋಡುವ'' ಎಂದು ಹೇಳಿದನು.

ಆಗ ಜನಕರಾಜನು—"ಸ್ವಾಮಿನ್, ತಾವು ಈ ರಾಜಪುತ್ರರನ್ನು ತಮ್ಮ ಸಂಗಡ ಕರೆದುಕೊಂಡು ಬಂದುದರಿಂದ ನನ್ನ ಮೇಲೆ ದೊಡ್ಡ ಉಪಕಾರವನ್ನು ಮಾಡಿದಂತಾಯಿತು ಒಂದುವೇಳೆ ರಾಮನು ಶಿವಧನುಸ್ಸ್ಯಕ್ಕೆ ಹೆದೆಯನ್ನೇರಿಸಿದರೆ ಅವನಿಗೆ ನಾನು ನನ್ನ ಮಗಳಾದ ಸೀತೆಯನ್ನು ಅರ್ಪಣಮಾಡುವೆನು" ಎಂದು ಹೇಳಿ, ಆ ಅತ್ಯಂತ ಜಡವಾದ ಧನುಸ್ಸ್ಯವನ್ನು ತನ್ನ ಸಭೆಯಲ್ಲಿ ತರಿಸಿದನು. ಆಗ ವಿಶ್ವಾಮಿತ್ರನು ರಾಮನಿಗೆ ಅಪ್ಪಣೆಯನ್ನು ಮಾಡಲು, ರಾಮನು ವಿಶ್ವಾಮಿತ್ರನಿಗೆ ನಮಸ್ಕರಿಸಿ, ತನ್ನ ಮಾತಾಪಿತೃಗಳನ್ನು ಮನಸ್ಸಿನಲ್ಲಿ ಸ್ಮರಿಸಿ, ಆ ಧನುಸ್ಸ್ಯದ ಬಳಿಗೆ ಹೋಗಿ, ಆ ಧನುಸ್ಸ್ಯಕ್ಕೆ ಹೆದೆಯನ್ನೇರಿಸುವದಕ್ಕೋಸ್ಕರ ಅದನ್ನು ಬಾಗಿಸಲಾಗಿ ಅದು ಮುರಿದು ಚೂರುಚೂರಾಯಿತು. ಅಲ್ಲಿ ನೆರೆದಿದ್ದ ಜನರು ರಾಮನ ಈ ಅದ್ಭುತಸಾಮರ್ಥ್ಯವನ್ನು ನೋಡಿ ಬಹಳ ಬೆರಗಾದರು. ಬಳಿಕ ಜನಕನು ಕೂಡಲೆ ಸೀತೆಯನ್ನು ಕರೆಯಿಸಿ, ಅವಳಿಂದ ರಾಮನಿಗೆ ಹೂಮಾಲೆಯನ್ನು ಹಾಕಿಸಿದನು. ಆ ತರುವಾಯ ಜನಕರಾಜನು ರಾಮ ಮತ್ತು ಸೀತೆ ಇವರ ವಿವಾಹದ ಸಿದ್ಧತೆಯನ್ನು ಮಾಡಿ, ದಶರಥನನ್ನು ಕರೆಯಿಸುವದಕ್ಕಾಗಿ ಅಯೋಧ್ಯೆಗೆ ಸಂದೇಶವನ್ನು

ಕಳುಹಿಸಿಕೊಟ್ಟನು ದಶರಥನು ಬಂದ ಬಳಿಕ ಇವರ ಲಗ್ನವು ಬಹಳ ವಿಜೃಂಭಣೆಯಿಂದ ನೆರವೇರಿತು ಜನಕನು ಉರ್ಮಿಳೆಯೆಂಬ ತನ್ನ ಎರಡನೇ ಮಗಳನ್ನು ಲಕ್ಷ್ಮಣನಿಗೆ ಕೊಟ್ಟು ಲಗ್ನಮಾಡಿದನು.

ಹಾಗೂ ರಾಮಲಕ್ಷ್ಮಣರ ಲಗ್ನದ ಸಂಗಡ ತನ್ನ ತಮ್ಮನಾದ ಕುಶಧ್ವಜನ ಒಬ್ಬ ಮಗಳಾದ ಮಾಂಡವಿಯನ್ನು ಭರತನಿಗೂ, ಇನ್ನೊಬ್ಬ ಮಗಳಾದ ಶೃತಕೀರ್ತಿಯನ್ನು ಶತ್ರುಘ್ನನಿಗೂ ಕೊಟ್ಟು ಲಗ್ನಮಾಡಿದನು.

ಈ ನಾಲ್ಕೂ ಲಗ್ನಗಳು ಬಹಳ ವಿಜೃಂಭಣೆಯಿಂದ ನಡೆದವು. ಜನಕರಾಜನು ತನ್ನ ನಾಲ್ಕೂ ಮಂದಿ ಮಕ್ಕಳಿಗೆ ಅವರ ಲಗ್ನದ ಪ್ರೀತ್ಯರ್ಥವಾಗಿ ಅತ್ಯಂತ ಅಮೌಲ್ಯವಾದ ಕಾಣಿಕೆಗಳನ್ನು ಅರ್ಪಿಸಿದನು. ಈ ವಿವಾಹದಿಂದ ದಶರಥನಿಗೂ ಅವನ ರಾಣಿಯರಿಗೂ ಬಹಳ ಸಂತೋಷವುಂಟಾಯಿತು ಈ ಲಗ್ನ ಸಮಾರಂಭವು ಸಮಾಪ್ತವಾದ ಬಳಿಕ ದಶರಥನೂ ಅವನ ಯಾವತ್ತು ಪರಿವಾರದವರೂ ಜನಕರಾಜನ ಅಪ್ಪಣೆಯನ್ನು ಪಡೆದುಕೊಂಡು ತಮ್ಮ ಊರಿಗೆ ಹೋಗಲಿಕ್ಕೆ ಹೊರಟರು. ಅವರು ಕೆಲವು ದೂರ ಹೋದ ತರುವಾಯ ದಾರಿಯಲ್ಲಿ ಜಮದಗ್ನಿ ಋಷಿಯ ಪುತ್ರನೂ ಮಹಾಪರಾಕ್ರಮಶಾಲಿಯೂ ಆದ ಪರಶುರಾಮನು ಅವರನ್ನು ಕಂಡು ಮಾತಾಡಿಸಿದನು. ಪರಶುರಾಮನ ಸಿಟ್ಟು ಕ್ಷತ್ರಿಯರ ಮೇಲೆ ಬಹಳವಿತ್ತು ಆದುದರಿಂದ ಅವನು ತಮಗೆ ಬಹಳ ಹಿಂಸೆಯನ್ನು ಮಾಡಬಹುದೆಂದು ದಶರಥನು ಅಂಜಿಕೊಂಡನು. ಪರಶುರಾಮನದೂ ರಾಮನದೂ ದರ್ಶನವಾಗಲಾಗಿ ಪರಶುರಾಮನು ರಾಮನಿಗೆ—"ಜನಕನ ಸಭೆಯಲ್ಲಿದ್ದ ಶಿವಧನುಷ್ಯವು ಬಹಳ ಜೀರ್ಣವಾಗಿದ್ದ ಕಾರಣ ನೀನು ಅದನ್ನು ಮುರಿದಿರ

ಬಹುದು ನೀನು ನನ್ನ ಹತ್ತರ ಇರುವ ವಿಷ್ಣುಧನುಷ್ಯ ವನ್ನು ಸಜ್ಜಮಾಡು. ಅಂದರೆ ನಿನ್ನ ಶಕ್ತಿಯು ತಿಳಿದಂತಾಗುವದು. ನೀನು ಸುಶೀಲನಿರುವದರಿಂದ ಇತರ ಕ್ಷತ್ರಿಯರಂತೆ ನಿನ್ನ ಕೈಯಿಂದ ಯಾವದೂ ಅನ್ಯಾಯದ ಕೃತ್ಯವು ಘಟಿಸುವದಿಲ್ಲೆಂಬು ವದು ನನಗೆ ಗೊತ್ತದೆ ಆದರೆ ನಿನ್ನ ನಿಜವಾದ ಪರಾಕ್ರಮವನ್ನು ನೋಡುವದಕ್ಕಾಗಿ ನಾನು ಇಲ್ಲಿ ಬಂದಿರುತ್ತೇನೆ" ಎಂದು ಹೇಳಿ ದನು. ಪರಶುರಾಮನ ಭಾಷಣವನ್ನು ಕೇಳಿ, ರಾಮನು ತನ್ನ ತಂದೆಗೂ ಗುರುಗಳಿಗೂ ನಮಸ್ಕರಿಸಿ, ವಿಷ್ಣುಧನುಷ್ಯವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ಸಜ್ಜಮಾಡಿ, ಪರಶುರಾಮ ನಿಗೆ—"ನನ್ನ ಬಾಣಗಳು ಎಂದೂ ಹುಸಿ ಹೋಗಲರಿಯವು ನಾನು ಈ ವಿಷ್ಣುಧನುಷ್ಯಕ್ಕೆ ಹೂಡಿದ ಬಾಣಗಳಿಂದ ನಿನ್ನ ಸ್ವರ್ಗದ ದಾರಿಯನ್ನು ಅಡ್ಡಗಟ್ಟಬೇಕೋ? ನಿನ್ನ ತೀರ್ಥಯಾತ್ರೆಗಳ ದಾರಿಯನ್ನು ಅಡ್ಡಗಟ್ಟಬೇಕೋ? ಹೇಳು. ನೀನು ಬ್ರಾಹ್ಮಣನಿರು ವದರಿಂದ ನನಗೆ ವಂದ್ಯನಿರುತ್ತೀ. ಆದುದರಿಂದ ನಿನ್ನ ಅಪೇಕ್ಷೆ ಯಂತೆ ನಡೆಯುವೆನು" ಎಂದು ನುಡಿದನು. ರಾಮನ ವಿನಯ ಪೂರ್ಣವಾದ ನುಡಿಯನ್ನು ಕೇಳಿ ಪರಶುರಾಮನಿಗೆ ಬಹಳ ಆನಂದ ವಾಯಿತು. ಆಗ ಅವನು ರಾಮನಿಗೆ—"ನಾನು ಸ್ವರ್ಗದ ಚಿಂತೆ ಯನ್ನು ಏನೂ ಮಾಡುವದಿಲ್ಲ. ನನಗೆ ನನ್ನ ತೀರ್ಥಯಾತ್ರೆಗಳ ದಾರಿಯು ಸುರಕ್ಷಿತವಾಗಿ ಉಳಿದರೆ ಸಾಕು" ಎಂದು ಉತ್ತರಕೊಟ್ಟ ನು. ಈ ಉತ್ತರವನ್ನು ಕೇಳಿ, ರಾಮನು ವಿಷ್ಣುಧನುಷ್ಯಕ್ಕೆ ಹೂಡಿದ ತನ್ನ ಬಾಣಗಳನ್ನು ಪ್ರಯೋಗಮಾಡಿ, ಪರಶುರಾಮನ ಸ್ವರ್ಗದ ದಾರಿಯನ್ನು ಅಡ್ಡಗಟ್ಟಿದನು. ರಾಮನ ಈ ಪರಾಕ್ರಮವನ್ನು ನೋಡಿ, ಪರಶುರಾಮನು ಬಹಳ ಆನಂದಪಟ್ಟು—"ನಿನಗೆ ಕಲ್ಯಾಣವಾಗಲಿ"

ಎಂದು ರಾಮುನಿಗೆ ಆಶೀರ್ವಾದಮಾಡಿ ಮಹೇಂದ್ರ ಪರ್ವತದ ಮೇಲೆ ತಪಶ್ಚರ್ಯ ಮಾಡುವದಕ್ಕೆ ಹೊರಟುಹೋದನು

ಆ ಬಳಿಕ ದಶರಥ ಮೊದಲಾದವರು ಅಯೋಧ್ಯೆಯ ದಾರಿಯನ್ನು ಹಿಡಿದು ಹೊರಟುಹೋದರು. ದಾರಿಯಲ್ಲಿ ಅವರಿಗೆ ಏನೂ ವಿಘ್ನವು ಬರಲಿಲ್ಲ. ಎಲ್ಲರು ಸುಖರೂಪವಾಗಿ ಅಯೋಧ್ಯೆಗೆ ಹೋಗಿ ತಲುಪಿದರು. ಇವರೆಲ್ಲರು ರಾಜಧಾನಿಗೆ ಹೋದ ಮೇಲೆ ನಗರವಾಸಿಗಳು ತಮ್ಮ ತಮ್ಮ ಮನೆಮನೆಗಳಿಗೆ ತಳಿರುತೋರಣಗಳನ್ನು ಕಟ್ಟಿ, ಪಟ್ಟಣವನ್ನು ಅತ್ಯಂತವಾಗಿ ಶೃಂಗರಿಸಿ, ವಾದ್ಯವೈಭವಗಳಿಂದ ಇವರೆಲ್ಲರನ್ನು ಸ್ವಾಗತಮಾಡಿ ರಾಜಧಾನಿಗೆ ಕರೆದುಕೊಂಡು ಬಂದರು.

## ೨. ಅಯೋಧ್ಯಾಕಾಂಡ.

(ಈ ಕಾಂಡದಲ್ಲಿ ಅಂದರೆ ಭಾಗದಲ್ಲಿ ರಾಮುಲಕ್ಷ್ಮಣಾದಿಕರ ವಿವಾಹವು ಮುಗಿದನಂತರ ಅವರೆಲ್ಲರು ತಿರುಗಿ ಅಯೋಧ್ಯೆಗ ಬಂದಾಗಿನಿಂದ ರಾಮನು ವನವಾಸಕ್ಕೆ ಹೋಗುವ ಪರಿಯಂತರ ಅಯೋಧ್ಯೆಯೊಳಗೆ ನಡೆದ ಸಂಗತಿಗಳನ್ನು ವರ್ಣಿಸಿರುವದರಿಂದ ಇದಕ್ಕ "ಅಯೋಧ್ಯಾಕಾಂಡ" ಎಂಬ ಹೆಸರು ಬಂದಿರುತ್ತದೆ)

ಈ ಸಮಯದಲ್ಲಿ ದಶರಥನಿಗೆ ಆದ ಆನಂದವನ್ನು ಎಷ್ಟೆಂದು ಬಣ್ಣಿಸಬೇಕು? ಅವನ ರಾಜ್ಯವು ವಿಸ್ತೀರ್ಣವೂ, ಸುಪೀಕವೂ, ಧನಕನಕಸಂಪನ್ನವೂ ಇದ್ದುದರಿಂದ ಅವನ ಯಾವತ್ತು ಪ್ರಜೆಗಳು ಸುಖಿಗಳೂ ಸಂತುಷ್ಟರೂ ಆಗಿದ್ದರು. ಮೇಲಾಗಿ ಅವನ ನಾಲ್ಕು ಮಂದಿ ಮಕ್ಕಳು ವಿದ್ಯಾವಂತರೂ ವಿನಯಸಂಪನ್ನರೂ ಇದ್ದು, ಒಬ್ಬರಿಗೊಬ್ಬರು ಪ್ರೀತಿಮಾಡುತ್ತ ಇರುತ್ತಿದ್ದರು. ಮೇಲಾಗಿ

ಇವರೆಲ್ಲರಿಗೆ ಅನುರೂಪವಾದ ಹೆಂಡರು ಇದ್ದುದರಿಂದ ಅವರೆಲ್ಲರು ಆನಂದದಿಂದಲೂ ಸುಖದಿಂದಲೂ ಸಂಸಾರ ಮಾಡಹತ್ತಿದರು. ಇಷ್ಟೆಲ್ಲ ಸಂಗತಿಗಳು ಸುದೈವದಿಂದ ಅನುಕೂಲವಿರುವಾಗ ದಶರಥರಾಜನು ಸುಖಾತಿಶಯದಲ್ಲಿರುವದು ಸ್ವಾಭಾವಿಕವೇ ಸರಿ. ಈ ಪ್ರಕಾರ ದಶರಥರಾಜನು ಸುಖಾತಿಶಯದಲ್ಲಿರುವಾಗ ಅವನ ಮಕ್ಕಳ ಮದುವೆಯಾಗಿ ಹನ್ನೆರಡು ವರ್ಷಗಳು ಮುಗಿದವು ಆ ತರುವಾಯ ವೃದ್ಧನಾದ ದಶರಥರಾಜನು ತನ್ನ ಸುಖಾತಿಶಯಕ್ಕೆ ಇನ್ನಿಷ್ಟು ಸುಖವನ್ನು ಹೆಚ್ಚಿಗೆ ಕೂಡಿಸಬೇಕೆಂಬ ಆಶೆಯಿಂದ ರಾಮಚಂದ್ರನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡುವ ವಿಚಾರವನ್ನು ನಡೆಸಿದನು ಆದುದರಿಂದ ಅವನು ಈ ಉತ್ಸವದ ಸಿದ್ಧತೆಯನ್ನು ಮಾಡುವದಕ್ಕೋಸ್ಕರ ತನ್ನ ಮಂತ್ರಿಗಳಿಗೆ ಅಪ್ಪಣೆಯನ್ನು ಕೊಟ್ಟನು. ಈ ಪ್ರಕಾರ ಅಯೋಧ್ಯಾನಗರದಲ್ಲಿ ಯುವರಾಜ ಪಟ್ಟಾಭಿಷೇಕ ಮಹೋತ್ಸವದ ಸಿದ್ಧತೆಯುಂತೂ ನಡೆಯಿತು. ಆದರೆ **"ತಾನೊಂದು ಬಯಸಿದರೆ ತನ್ನ ದೈವವು ಇನ್ನೊಂದು ಬಯಸಿತು"** ಎಂಬಂತೆ ದಶರಥನ ಮನೋರಥವು ಭಂಗವಾಗಲಿಕ್ಕೆ ಮಹತ್ವದ ಕಾರಣವುಂಟಾಯಿತು. ಅದೇನಂದರೆ:—

ಕೈಕೆಯಿ ರಾಣಿಗೆ ಮಂಥರಾ ಎಂಬ ಒಬ್ಬ ದಾಸಿಯು ಇದ್ದಳು. ಅವಳು ಕೈಕೆಯಿ ರಾಣಿಯ ಮನಸ್ಸಿನಲ್ಲಿ ಪಾಪವಿಚಾರಗಳನ್ನು ಉತ್ಪನ್ನಮಾಡಿದಳು. ಅವಳು ಕೈಕೆಯಿಗೆ ಹೇಳಿದ್ದೇನೆಂದರೆ— "ಏನೇ? ನೀನು ಹುಚ್ಚಿ ಕಾಣುತ್ತೀ! ರಾಮನು ಯುವರಾಜನಾದ ಬಳಿಕ ಅವನ ಸೇವೆಯನ್ನು ಮಾಡುವ ಕೆಲಸವು ನಿನ್ನ ಮಗನಾದ ಭರತನಿಗೆ ಬರುವದೆಂಬುವದನ್ನು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೋ. ನೀನು ಹಿಂದಕ್ಕೆ ದಶರಥರಾಜನ ಕಡೆಯಿಂದ

ಬೇಡಿಕೊಂಡ ಎರಡು ವರಗಳ ಉಪಯೋಗವನ್ನು ಈಗ ಮಾಡಿ ಕೊಂಡರೆ ನಿನ್ನ ಮತ್ತು ನಿನ್ನ ಮಗನ ಕಲ್ಯಾಣವಾಗುವದು ಮೊದಲನೇ ವರದಿಂದ ರಾಮನನ್ನು ೧೪ ವರ್ಷ ವನವಾಸಕ್ಕೆ ಕಳುಹಿಸಬೇಕೆಂತಲೂ, ಎರಡನೇ ವರದಿಂದ ಭರತನನ್ನು ಯುವರಾಜ ಪಟ್ಟಾಭಿಷೇಕಮಾಡಬೇಕೆಂತಲೂ ಕೇಳಿಕೋ. ನಿನ್ನ ಪತಿಯಾದ ದಶರಥನು ಏಕವಚನಸ್ಥನಿರುವದರಿಂದ ಅವನು ನಿನ್ನ ವರಗಳನ್ನು ಪೂರ್ಣಮಾಡುವನು. ಈ ಉತ್ತಮ ಪ್ರಸಂಗವು ತಾನಾಗಿ ಬಂದಿದ್ದು ಇದನ್ನು ಕಳೆದುಕೊಂಡರೆ ನೀನು ಕೌಸಲ್ಯೆಯ ದಾಸಿಯಾಗುವಿ ಮತ್ತು ಭರತನಾದರೂ ರಾಮನ ದಾಸನಾಗುವನು. ಆ ಮೇಲೆ ನಿಮಗಿಬ್ಬರಿಗೂ ಭಯಂಕರವಾದ ಕಷ್ಟಗಳನ್ನು ಅನುಭೋಗಿಸಬೇಕಾದೀತು. ಈ ಬಗ್ಗೆ ನೀನು ಚೆನ್ನಾಗಿ ವಿಚಾರ ಮಾಡಿ ನಿನ್ನ ಮತ್ತು ನಿನ್ನ ಮಗನ ಕಲ್ಯಾಣವನ್ನು ಮಾಡಿಕೋ" ಈ ಪ್ರಕಾರ ಮಂಥರೆಯು ಕೈಕೆಯಿಗೆ ಹೇಳಿ ಹುರಿದುಂಬಿಸಿದ ಕೂಡಲೆ ಕೈಕೆಯಿಯ ಹೊಟ್ಟೆಯಲ್ಲಿ ಸವತೀಮತ್ಸರವು ಹುಟ್ಟಿತು. ಹಾಗೂ ಮುಂದೆ ತನ್ನ ಪ್ರಿಯಕರ ಮಗನಾದ ಭರತನಿಗೆ ನಿಜವಾಗಿ ಕಠಿಣ ಪ್ರಸಂಗವು ಬರುವದೆಂದು ಅವಳಿಗೆ ತಿಳಿದುಬಂತು. ಆದುದರಿಂದ ಅವಳು ದಶರಥರಾಜನ ಹತ್ತರ ಅವನು ತನಗೆ ಹಿಂದಕ್ಕೆ ಕೊಟ್ಟ ಎರಡು ವರಗಳನ್ನು ಪೂರ್ಣಮಾಡಿ ಮೊದಲನೇ ವರದಿಂದ ಭರತನನ್ನು ಪಟ್ಟಾಭಿಷೇಕ ಮಾಡಬೇಕೆಂತಲೂ, ಎರಡನೇ ವರದಿಂದ ರಾಮನನ್ನು ೧೪ ವರ್ಷ ವನವಾಸಕ್ಕೆ ಕಳುಹಿಸಬೇಕೆಂತಲೂ ಹಟವನ್ನು ಹಿಡಿದಳು. ದಶರಥನು ಅವಳಿಗೆ ಬೇಕಾದಷ್ಟು ರೀತಿಯಿಂದ ಸಮಾಧಾನ ಹೇಳಿದಾಗ್ಯೂ ಅವಳು ತನ್ನ ಹಟವನ್ನು ಬಿಟ್ಟುಕೊಡಲಿಲ್ಲ. ದಶರಥರಾಜನ ಮನಸ್ಸಿಗೆ ತಾನು ಕೊಟ್ಟ ವಚನ

ವನ್ನು ಮುರಿಯುವದಾದರೂ ಬರಲಿಲ್ಲ. ಆದುದರಿಂದ ಅವನು ರಾಮನನ್ನು ತನ್ನ ಬಳಿಗೆ ಕರೆಯಿಸಿ ಅತ್ಯಂತ ದುಃಖದಿಂದ—"ರಾಮಾ, ನಿನ್ನನ್ನು ವನವಾಸಕ್ಕೆ ಕಳುಹಿಸಿ, ಭರತನನ್ನು ಪಟ್ಟಾಭಿಷೇಕ ಮಾಡಬೇಕೆಂದು ಕೈಕೆಯಿಯ ಮನಸ್ಸಿನಲ್ಲಿ ಇರುವದು ನಾನು ಅವಳಿಗೆ ಹಿಂದಕ್ಕೆ ಎರಡು ವರಗಳನ್ನು ಕೊಟ್ಟಿದ್ದೆನು. ಅವುಗಳನ್ನು ಈಗ ನಾನು ಪೂರ್ಣಮಾಡಬೇಕೆಂದು ಅವಳು ಹಟವನ್ನು ಹಿಡಿದಿರುತ್ತಾಳೆ. ನಾನು ನನ್ನ ವಚನವನ್ನು ತಿರುಗಿಸಲಾರೆನು. ಹಾಗೂ ನಿನಗೆ ಅರಣ್ಯಕ್ಕೆ ಹೋಗೆಂದು ಹೇಳಲಾರೆನು. ಈ ಪ್ರಕಾರ ನಾನು ಈಗ ಘೋರವಾದ ಸಂಕಟದಲ್ಲಿ ಬಿದ್ದಿರುತ್ತೇನೆ" ಎಂದು ಹೇಳಿದನು.

ಇದನ್ನು ಕೇಳಿ, ರಾಮನು ಆನಂದಮುದ್ರೆಯಿಂದ—"ತಂದೆಯೇ, ನೀನು ಇದಕ್ಕಾಗಿ ಮನಸ್ಸಿನಲ್ಲಿ ಏನೂ ವಿಷಾದಪಡಬೇಡ. ರಾಜ್ಯವನ್ನು ನಾನು ಆಳಿದರೂ ಅಷ್ಟೇ, ಭರತನು ಆಳಿದರೂ ಅಷ್ಟೇ. ನನಗೆ ರಾಜ್ಯದ ಅಪೇಕ್ಷೆಯು ತಿಲಮಾತ್ರವಾದರೂ ಇಲ್ಲ. ನಾನು ಅರಣ್ಯಕ್ಕೆ ಹೋಗಲು ಸಿದ್ಧನಿದ್ದೇನೆ. ನನಗೆ ಅರಣ್ಯದಲ್ಲಿ ದುಃಖವಾಗಲಿ, ಕಷ್ಟವಾಗಲಿ ಉಂಟಾದೀತೆಂಬ ಕಲ್ಪನೆಯನ್ನು ನೀನು ಸ್ವಪ್ನದಲ್ಲಿ ಸಹ ತರಬೇಡ" ಎಂದು ದಶರಥನಿಗೆ ಸಮಾಧಾನಪಡಿಸಿ ತನಗೆ ಅರಣ್ಯಕ್ಕೆ ಹೋಗುವದಕ್ಕಾಗಿ ಅಪ್ಪಣೆಯನ್ನು ಕೇಳಬೇಕೆಂದು ಕೌಸಲ್ಯೆಯ ಕಡೆಗೆ ಹೋದನು. ಅವಳು ತನ್ನ ಮಗನಿಗೆ ಈ ಹೊತ್ತು ಯುವರಾಜ ಪಟ್ಟಾಭಿಷೇಕವು ಆಗುವದೆಂದು ಆನಂದದಲ್ಲಿದ್ದಳು. ಆದರೆ ರಾಮನು ತಾನು ದಶರಥರಾಜನ ಆಜ್ಞೆಯ ಮೇರೆಗೆ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗುವೆನೆಂದು ಹೇಳಿದ ಕೂಡಲೆ ಅವಳಿಗೆ ಅತ್ಯಂತ ದುಃಖವಾಯಿತು. ಆದಾಗ್ಯೂ

ಅವಳು ದೈವಕ್ಕೆ ಬಂದದ್ದನ್ನು ಅನುಭೋಗಿಸತಕ್ಕದ್ದೆಂದು ಗಟ್ಟಿ ಮನಸ್ಸು ಮಾಡಿ, ರಾಮನು ಹೇಳಿದ ತಿಳುವಳಿಕೆಯ ಮಾತುಗಳನ್ನು ಕೇಳಿಕೊಂಡು, ಬಹಳ ದುಃಖದಿಂದ ಅವನಿಗೆ ಅರಣ್ಯಕ್ಕೆ ಹೋಗಲು ಅಪ್ಪಣೆಯನ್ನು ಕೊಟ್ಟಳು ಆ ಮೇಲೆ ರಾಮನು ಕೈಕೆಯಿಯ ಅಪ್ಪಣೆಯನ್ನು ಕೇಳಲಿಕ್ಕೆ ಹೋದನು. ಕೈಕೆಯಿಯಿಂದ ತನ್ನ ಪಟ್ಟಾಭಿಷೇಕದ ಉತ್ಸವಕ್ಕೆ ವಿಘ್ನವು ಬಂದು, ತನಗೆ ಹದಿನಾಲ್ಕು ವರ್ಷ ವನವಾಸಕ್ಕೆ ಹೋಗಬೇಕಾಯಿತೆಂದು ರಾಮನು ಅವಳ ಮೇಲೆ ಎಳ್ಳಷ್ಟು ಸಹ ಸಿಟ್ಟಾಗಲಿಲ್ಲ ಅವನು ಬಹಳ ಪ್ರೀತಿಯಿಂದಲೂ ನಮ್ರತೆಯಿಂದಲೂ ಅವಳ ಅಪ್ಪಣೆಯನ್ನು ತೆಗೆದುಕೊಂಡನು. ಆ ಮೇಲೆ ತಾಯಿಯಾದ ಸುಮಿತ್ರೆಯ ಬಳಿಗೆ ಹೋಗಿ, ಅವಳ ಅಪ್ಪಣೆಯನ್ನು ತೆಗೆದುಕೊಂಡು, ಸೀತಾ ಮತ್ತು ಲಕ್ಷ್ಮಣರ ನಿರೂಪವನ್ನು ತೆಗೆದುಕೊಳ್ಳಲಿಕ್ಕೆ ಹೋದನು. ಸೀತಯ ಪ್ರೇಮವು ತನ್ನ ಪತಿಯ ಮೇಲೆ ಅತಿಶಯವಿದ್ದುದರಿಂದ ತಾನೂ ಅವನ ಸಂಗಡ ಅರಣ್ಯಕ್ಕೆ ಹೊರಡುತ್ತೇನೆಂದು ಹಟವನ್ನು ಹಿಡಿದಳು ಆಗ ಅವನು ನಿರುಪಾಯದಿಂದ ಅವಳನ್ನು ತನ್ನ ಸಂಗಡ ಕರೆದುಕೊಂಡು ಹೋಗುವದಕ್ಕೆ ಒಡಂಬಟ್ಟನು ಆ ಮೇಲೆ ಲಕ್ಷ್ಮಣನಾದರೂ ಅದೇ ಪ್ರಕಾರ ಹಟವನ್ನು ಹಿಡಿದದ್ದರಿಂದ ರಾಮಚಂದ್ರನು ಅವನನ್ನು ಸಹ ತನ್ನ ಸಂಗಡ ಕರೆದುಕೊಂಡು ಹೋಗುವದಕ್ಕೆ ಒಪ್ಪಿಕೊಂಡನು.

ಈ ಪ್ರಕಾರ ಮೂರು ಜನರು ಅರಣ್ಯಕ್ಕೆ ಹೋಗುವದಕ್ಕಾಗಿ ಹೊರಟರು. ಆಗ ಅಯೋಧ್ಯೆಯ ಯಾವತ್ತು ಜನರಿಗೆ ಅಪರಿಮಿತ ದುಃಖವುಂಟಾಯಿತು. ಅಲ್ಲಿಯ ಯಾವತ್ತು ಸ್ತ್ರೀಪು

ಋಷಿಗಳು ಒಂದೇಸವನೆ ಅಳಲಾರಂಭಿಸಿದರು ಅವರೆಲ್ಲರು ರಾಮ, ಸೀತಾ, ಲಕ್ಷ್ಮಣರನ್ನು ಊರ ಹೊರಗೆ ಮುಟ್ಟಿಸಲಿಕ್ಕೆ ಬಂದರು. ಈ ಮೂರೂ ಜನರು ಸುಮಂತನಿಂದ ಸಿದ್ಧಮಾಡಲ್ಪಟ್ಟ ರಥದಲ್ಲಿ ಕುಳಿತು ವನವಾಸಕ್ಕೆ ಹೊರಡಲು, ಅವರ ಹಿಂದೆ ದಶರಥನೂ ಅಯೋಧ್ಯಾಪುರನಿವಾಸಿಗಳೂ ಅಳುತ್ತ ಆ ರಥದ ಹಿಂದೆ ನಡೆದರು. ಅವರೆಲ್ಲರು ರಾಜಧಾನಿಯ ಶೀಮೆಯ ವರಿಯಂತರ ಆವರನ್ನು ಮುಟ್ಟಿಸಿ ಶೋಕಮಾಡುತ್ತ ತಿರುಗಿ ಬಂದರು. ದಶರಥನು ತಿರುಗಿ ಬಂದು, ತನ್ನ ಮಂದಿರದೊಳಗೆ ಹೋಗಿ, ದುಃಖದಿಂದ "ಅಯ್ಯೋ! ರಾಮ!" ಎಂದು ಉಸುರುಗರೆಯುತ್ತ ತನ್ನ ಹಾಸಿಗೆಯ ಮೇಲೆ ಬಿದ್ದು ಹೊರಳಾಡಹತ್ತಿದನು ಅವನಿಗೆ ರಾಮನ ವಿಯೋಗದಿಂದ ಅತಿಶಯ ದುಃಖವಾಗಿ ಕಡೆಗೆ ಅವನು ಆದರಿಂದಲೇ ಬೇಗನೆ ಪ್ರಾಣಬಿಟ್ಟನು. ಇದರಿಂದ ನಗರದೊಳಗೆ ಎಲ್ಲಿ ನೋಡಿದಲ್ಲಿ ದುಃಖದ ಆಕ್ರೋಶವು ಹರಡಿತು.

ಈ ಸಮಯದಲ್ಲಿ ಭರತ ಮತ್ತು ಶತ್ರುಘ್ನರು ತಮ್ಮ ಸೋದರಮಾವನಾದ ಅಶ್ವಪತಿಯ ರಾಜಧಾನಿಯಾದ ಗಿರಿವ್ರಜ ಎಂಬ ನಗರದಲ್ಲಿ ಇರುತ್ತಿದ್ದರು. ದಶರಥನ ಅಂತ್ಯವಿಧಿಯನ್ನು ಮಾಡಲಿಕ್ಕೆ ಅವನ ನಾಲ್ಕು ಮಂದಿ ಮಕ್ಕಳಲ್ಲಿ ಒಬ್ಬರೂ ಅಯೋಧ್ಯೆಯಲ್ಲಿ ಇದ್ದಿಲ್ಲ. ಆದುದರಿಂದ ಅವರ ಕುಲಗುರುಗಳಾದ ವಸಿಷ್ಠರು ಭರತ ಶತ್ರುಘ್ನರ ಕಡೆಗೆ ಒಬ್ಬ ದೂತನನ್ನು ಕಳುಹಿಸಿ ಅವರನ್ನು ಕರೆಯಿಸಿಕೊಂಡರು ದಶರಥರಾಜನು ಮರಣಹೊಂದಿದ ವರ್ತಮಾನವನ್ನಾಗಲಿ, ರಾಮಚಂದ್ರನು ವನವಾಸಕ್ಕೆ ಹೋದ ವರ್ತಮಾನವನ್ನಾಗಲಿ ಅವರಿಗೆ ಅಲ್ಲಿ ತಿಳುಹಿಸಬಾರದೆಂದು ವಸಿಷ್ಠರ ಅಪ್ಪಣೆಯಾದ ಮೇರೆಗೆ ಆ ದೂತನು ಅವರಿಗೆ

ಆ ಬಗ್ಗೆ ಏನೂ ವರ್ತಮಾನವನ್ನು ತಿಳುಹಿಸಲಿಲ್ಲ. ಅವನು ಅವರಿಗೆ ಅರಮನೆಯಲ್ಲಿ ಬಹಳ ಅಗತ್ಯದ ಕೆಲಸವುಂಟೆಂದು ವಸಿಷ್ಠರು ನಿರೂಪಕೊಟ್ಟಿದನ್ನುಮಾತ್ರತಿಳುಹಿಸಿ.ಅವರಿಬ್ಬರನ್ನೂಅಯೋಧ್ಯೆಗೆ ಕರೆದುಕೊಂಡು ಬಂದನು ಭರತನು ಅಯೋಧ್ಯೆಗೆ ಬಂದು ನೋಡು ವಷ್ಟರಲ್ಲಿ ಅಲ್ಲಿ ಯಾವತ್ತು ಪ್ರಕಾರವು ವಿಪರೀತವಾಗಿ ಹೋಗಿತ್ತು ದಶರಥನು ಮರಣಪಟ್ಟಿದ್ದನು. ರಾಮ, ಸೀತಾ, ಲಕ್ಷ್ಮಣರು ವನ ವಾಸಕ್ಕೆ ಹೋಗಿದ್ದರು. ಪೌರಜನರು ದುಃಖಾಗ್ನಿಯಿಂದ ಬೆಂದು ಬೆಂಡಾಗಿದ್ದರು. ಇದಕ್ಕೆಲ್ಲ ತನ್ನ ತಾಯಿಯಾದ ಕೈಕೆಯಿಯೇ ಕಾರಣಳೆಂದು ಭರತನಿಗೆ ಗೊತ್ತಾಯಿತು. ಆದುದರಿಂದ ಅವನು ತನ್ನ ತಾಯಿಯ ಮೇಲೆ ಬಹಳ ಸಿಟ್ಟಾಗಿ ಅವಳನ್ನು ಕೊಲ್ಲಲಿಕ್ಕೆ ಸಹ ಸಿದ್ಧನಾದನು. ಆದರೆ ವಸಿಷ್ಠರು ಅವನನ್ನು ಶಾಂತಪಡಿಸಿ. ಅವ ನಿಗೆ ದಶರಥನ ಉತ್ತರಕ್ರಿಯೆಗಳನ್ನು ನೆರವೇರಿಸಲಿಕ್ಕೆ ಆಜ್ಞಾಪಿ ಸಲು, ಅವನು ಅವುಗಳನ್ನು ಯಥಾಸಾಂಗಮಾಡಿದನು.

ತನ್ನ ತಾಯಿಯು ತನಗೆ ರಾಜ್ಯವು ದೊರಕಬೇಕೆಂದು ಮಾಡಿದ ಪ್ರಯತ್ನವು ಬಹಳ ಅಯೋಗ್ಯವಾದುದೆಂದು ಭರತನಿಗೆ ಕಂಡುಬಂದಿತು. ಸಿಂಹಾಸನದ ಮೇಲೆ ರಾಮನೇ ಕುಳಿತುಕೊ ಳ್ಳಲಿಕ್ಕೆ ಯೋಗ್ಯನೆಂದು ಅವನು ಮನಃಪೂರ್ವಕವಾಗಿ ನಂಬಿ ದ್ದನು ಆದುದರಿಂದ ಅವನು ತಾನು ರಾಜ್ಯವನ್ನು ಸ್ವೀಕರಿಸಲಿಕ್ಕೆ ಒಪ್ಪಿಕೊಳ್ಳದೆ, ರಾಮನನ್ನು ಕರೆದುಕೊಂಡು ಬರುವದಕ್ಕಾಗಿ ಅರ ಣ್ಯಕ್ಕೆ ಹೋದನು ಅವನ ಸಂಗಡ ಶತ್ರುಘ್ನನೂ, ವಸಿಷ್ಠಗುರು ಗಳೂ, ನೂರಾರು ಜನರೂ ಹೊರಟರು.

ಇತ್ತಲಾ ರಾಮನು ತನ್ನ ತಂದೆಯ ಆಜ್ಞೆಗನುಸರಿಸಿ, ಅಯೋಧ್ಯಾನಗರವನ್ನು ಬಿಟ್ಟು, ಅರಣ್ಯಕ್ಕೆ ಹೊರಟ ತರುವಾಯ

ಮೊದಲನೇ ದಿವಸ ಸಾಯಂಕಾಲಕ್ಕೆ ತಮಸಾನದಿಯ ತೀರದ ಮೇಲೆ ಬಂದು ಇಳಿದುಕೊಂಡನು ಅಲ್ಲಿ ರಾಮಲಕ್ಷ್ಮಣರು ಕ್ಷತ್ರಿಯ ಧರ್ಮಕ್ಕನುಸರಿಸಿ ಸಂಧ್ಯಾವಂದನಾದಿ ಕರ್ಮಗಳನ್ನು ತೀರಿಸಿಕೊಂಡರು. ಆ ಮೇಲೆ ಅಲ್ಲಿ ಆ ಇಬ್ಬರು ಅಣ್ಣತಮ್ಮಂದಿರು, ಸೀತೆಯು, ಸುಮಂತ ಸಾರಥಿಯು, ಮೊದಲಾದವರು ಮಲಗಿ ಕೊಂಡರು ಮರುದಿವಸ ಬೆಳಗಿನ ಜಾವಿನಲ್ಲಿ ಸುಮಂತನು ಕುದುರೆಗಳನ್ನು ಹೂಡಿ ರಥವನ್ನು ಸಿದ್ಧವಡಿಸಲು, ರಾಮನು ಅದ ರೊಳಗೆ ಸೀತೆಯನ್ನೂ ಲಕ್ಷ್ಮಣನನ್ನೂ ಕುಳ್ಳಿರಿಸಿಕೊಂಡು ತಮಸಾ ಮತ್ತು ವೇದಶೃತಿ ನದಿಗಳನ್ನು ದಾಟ ಅಗಸ್ತ್ಯಾಶ್ರಮಕ್ಕೆ ಬಂದನು. ಅಲ್ಲಿ ಅವರೆಲ್ಲರು ಅಗಸ್ತ್ಯಋಷಿಗೆ ವಂದನಮಾಡಿ, ಅವನ ಆಶೀ ರ್ವಾದಗಳನ್ನು ತೆಗೆದುಕೊಂಡು, ಗೋಮತಿ ನದಿಯನ್ನು ಇಳಿದು, ಆ ನದಿಯ ಆಚೆಗೆ ಹೋದರು. ಆ ಮೇಲೆ ಸ್ಯಂದಿನಿ ನದಿಯನ್ನು ದಾಟಿ, ನಾನಾ ಪ್ರಕಾರದ ರಮಣೀಯ ದೇಶಗಳನ್ನು ನೋಡುತ್ತ, ಗಂಗಾನದಿಯ ತೀರಕ್ಕೆ ಬಂದು ಮುಟ್ಟಿದರು ಹಾಗೂ ಶೃಂಗ ವೇರ ಎಂಬ ನಗರದಲ್ಲಿ ಇಳಿದುಕೊಂಡರು. ಅಲ್ಲಿ ಗುಹ ಎಂಬ ಒಬ್ಬ ಅಂಬಿಗರ ಜಾತಿಯ ಅರಸನು ರಾಜ್ಯವಾಳುತ್ತಿದ್ದನು ಅವನು ದಶರಥರಾಜನ ಮಿತ್ರನಿದ್ದು ಅವನ ಪ್ರೀತಿಯು ರಾಮಲಕ್ಷ್ಮಣರ ಮೇಲೆ ಬಹಳವಿತ್ತು ಆದುದರಿಂದ ಅವನು ಅವರಿಗೆ -- "ನೀವು ವನವಾಸಕ್ಕೆ ಹೋಗಬೇಡಿರಿ ನೀವಿಬ್ಬರೂ ನನ್ನ ನಗರದಲ್ಲಿಯೇ ವಾಸಿಸಿರಿ" ಎಂದು ಬೇಕಾದಷ್ಟು ಆಗ್ರಹಮಾಡಿದನು. ಅವನು ರಾಮ ನಿಗೆ - "ನನ್ನ ರಾಜ್ಯವನ್ನು ನಿನಗೆ ಪೂರಾ ಒಪ್ಪಿಸುತ್ತೇನೆ ಅದನ್ನು ನೀನೇ ಆಳು" ಎಂದು ಹೇಳಿ, ಅವನ ಮನಸ್ಸನ್ನು ಒಲಿಸಲಿಕ್ಕೆ ನಾನಾ ಪರಿಯಿಂದ ಪ್ರಯತ್ನಮಾಡಿದನು ಆದರೆ ರಾಮನು ಅದಕ್ಕೆ ಒಪ್ಪದೆ

ಪಿತನ ಆಜ್ಞೆಯ ಪ್ರಕಾರ ಹದಿನಾಲ್ಕು ವರ್ಷ ವನವಾಸ ಮಾಡಬೇ ಕಾಗಿರುತ್ತದೆಂದು ಗುಹನಿಗೆ ಹೇಳಿ ಅವನು ಕೊಡಬೇಕೆಂದಿದ್ದ ರಾಜ್ಯವನ್ನು ಸ್ವೀಕರಿಸಲಿಲ್ಲ ಆಗ ಗುಹನು ನಿರುಪಾಯದಿಂದ ರಾಮನಿಗೆ ಗಂಗಾನದಿಯನ್ನು ದಾಟ ಹೋಗಲಿಕ್ಕೆ ಒಂದು ಡೋಣಿ ಯನ್ನು ಕೊಟ್ಟನು. ರಾಮನು ಆ ಡೋಣಿಯಲ್ಲಿ ಕುಳಿತುಕೊ ಳ್ಳುವಾಗ ಸುಮಂತನಿಗೆ ಅಯೋಧ್ಯೆಗೆ ತಿರುಗಿ ಹೋಗಲು ಅಪ್ಪಣೆಯನ್ನು ಕೊಟ್ಟನು.

ಈ ಮೇರೆಗೆ ಸುಮಂತನು ಅಲ್ಲಿಂದ ತಿರುಗಿ ಹೋದ ತರು ವಾಯ ರಾಮ, ಲಕ್ಷ್ಮಣ ಮತ್ತು ಸೀತಾ ಈ ಮೂರು ಜನರು ಗುಹನು ಕೊಟ್ಟ ಡೋಣಿಯಲ್ಲಿ ಕುಳಿತು, ಗಂಗಾನದಿಯನ್ನು ದಾಟ, ಭಾರದ್ವಾಜ ಋಷಿಯ ಆಶ್ರಮಕ್ಕೆ ಬಂದು ಮುಟ್ಟಿದರು. ಅಲ್ಲಿಂದ ಅವರು ಪಾದಚಾರಿಯಾಗಿ ನಡೆಯುತ್ತ ಚಿತ್ರಕೂಟ ಪರ್ವತಕ್ಕೆ ಬಂದರು. ಹಾಗೂ ಅಲ್ಲಿ ಒಂದು ಗುಡುಸಲವನ್ನು ಕಟ್ಟಿಕೊಂಡು ಇರಲಿಕ್ಕೆ ಹತ್ತಿದರು.

ಇತ್ತಲಾ ಭರತನು ರಾಮನನ್ನು ಕಾಣುವದಕ್ಕಾಗಿ ಹೊರಟು, ತನ್ನ ಪರಿವಾರಸಹವರ್ತಮಾನ ಅರಣ್ಯದಲ್ಲಿ ರಾಮನನ್ನು ಶೋಧ ಮಾಡುತ್ತ, ಗಂಗಾನದಿಯನ್ನು ದಾಟ, ಚಿತ್ರಕೂಟ ಪರ್ವತಕ್ಕ ಬಂದ ನು. ರಾಮ, ಲಕ್ಷ್ಮಣ ಮತ್ತು ಸೀತಾ ಈ ಮೂರು ಜನರು ಒಂದು ಬಡ ಗುಡುಸಲದಲ್ಲಿ ಆನಂದದಿಂದ ಕುಳಿತುಕೊಂಡಿದ್ದರು ಇವರನ್ನು ನೋಡಿದ ಕೂಡಲೆ ಭರತನು ಅತಿಶಯ ದುಃಖದಿಂದ ತುಂಬಿದವನಾಗಿ ಒಮ್ಮೆಲೆ ರಾಮನನ್ನು ತಬ್ಬಿಕೊಂಡು ಅಳಹತ್ತಿ ದನು. ಈ ಪ್ರಕಾರ ಅಕಸ್ಮಾತ್ತಾಗಿ ಭರತನು ಆ ಸ್ಥಳಕ್ಕೆ ಬಂದು ದನ್ನು ನೋಡಿ ರಾಮನಿಗೆ ಬಹಳ ಆಶ್ಚರ್ಯವಾಯಿತು. ರಾಮನು

ಭರತನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದನು ಅವುಗಳು ಯಾವ ವೆಂದರೆ: "ಭರತಾ! ನೀನು ಯಾವಾಗ್ಗೆ ಬಂದೆ? ನಿನಗೆ ಯುವ ರಾಜಪಟ್ಟಾಭಿಷೇಕವಾಯಿತೋ? ನನ್ನ ವಿಯೋಗದಿಂದ ಪಿತನಿಗೆ ಆದ ದುಃಖವನ್ನು ನೀನು ನಿನ್ನ ಮಧುರ ಶಬ್ದಗಳಿಂದ ಸ್ವಲ್ಪಾದರೂ ಕಡಿಮೆಮಾಡಿದೆಯೋ? ನನ್ನ ಮೂರು ಜನ ಮಾತುಶ್ರೀಯವರು ಕ್ಷೇಮದಿಂದಿರುತ್ತಾರಷ್ಟೇ? ಅಯೋಧ್ಯೆಯಲ್ಲಿಯ ಜನರು ಕ್ಷೇಮದಿಂದಿರುವರೋ?"

ಈ ಪ್ರಕಾರ ರಾಮನು ಭರತನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದಾಗ್ಯೂ ಭರತನು ಒಂದು ತುಟಿ ಎರಡು ಮಾಡದೆ ಸುಮ್ಮನೆ ನಿಂತುಕೊಂಡನು. ಅವನು ರಾಮನ ಕುತ್ತಿಗೆಗೆ ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳಲಿಕ್ಕ ಹತ್ತಿದನು ಆಗ ರಾಮನು ಅಯೋಧ್ಯೆಯಲ್ಲಿ ಏನಾದರೂ ವಿಪರೀತ ಪ್ರಕಾರವು ಸಂಭವಿಸಿರಬಹುದೆಂದು ತರ್ಕಿಸಿದನು ಇಷ್ಟರಲ್ಲಿ ವಸಿಷ್ಠ ಋಷಿಗಳು ಶುಭ್ರವಸ್ತ್ರಗಳನ್ನು ಪರಿಧಾನಮಾಡಿದ ಕೌಸಲ್ಯಾದಿ ಮೂರು ಮಂದಿ ರಾಣಿಯರನ್ನೂ ಪೌರಜನರನ್ನೂ ಕೂಡಿಕೊಂಡು ಆ ಸ್ಥಳಕ್ಕೆ ಬಂದರು. ಆಗ ವಸಿಷ್ಠರು ರಾಮನಿಗೆ ಅಯೋಧ್ಯೆಯ ಯಾವತ್ತು ವರ್ತಮಾನವನ್ನು ತಿಳುಹಿಸಿದರು ದಶರಥನ ಮರಣದ ವರ್ತಮಾನವನ್ನು ಕೇಳಿದ ಕೂಡಲ ರಾಮನು ಅತ್ಯಂತ ದುಃಖದಿಂದ ಮೂರ್ಛೆ ಹೊಂದಿ ಭೂಮಿಯ ಮೇಲೆ ಬಿದ್ದನು ಆಗ ವಸಿಷ್ಠರು ಅವನಿಗೆ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ ಸಮಾಧಾನಪಡಿಸಿ ಅವನನ್ನು ಮೇಲಕ್ಕೆ ಎಬ್ಬಿಸಿದರು.

ಬಳಿಕ ರಾಮನು ಫಲ್ಗುನದಿಯ ತೀರದ ಮೇಲೆ ತನ್ನ ಪ್ರಿಯ ಪಿತನ ಶ್ರಾದ್ಧವನ್ನು ಮಾಡಿದನು. ಈ ಶ್ರಾದ್ಧವಿಧಿಯು

ಮುಗಿದು, ಎಲ್ಲ ಜನರು ಸ್ವಲ್ಪ ಸ್ವಸ್ಥಚಿತ್ತರಾದ ಬಳಿಕ, ರಾಮನು ಭರತನಿಗೆ—"ತಮ್ಮಾ ಭರತಾ! ನಮ್ಮ ಪಿತನ ಆಜ್ಞೆಯ ಪ್ರಕಾರ ನಾನು ನಡೆದುಕೊಳ್ಳುವದು ಯೋಗ್ಯವಿರುತ್ತದೆ. ನಾನು ವನವಾಸಕ್ಕೆ ಬಂದು ಅವನ ಆಜ್ಞೆಯನ್ನು ಪಾಲಿಸಿದೆನು. ನೀನು ರಾಜ್ಯವನ್ನು ಅಂಗೀಕರಿಸಿ ಅವನ ಆಜ್ಞೆಯನ್ನು ಪಾಲಿಸುವದು ಯೋಗ್ಯವು. ಆದುದರಿಂದ ನೀನು ತಿರುಗಿ ಅಯೋಧ್ಯೆಗೆ ಹೋಗಿ ಪ್ರಜೆಗಳನ್ನು ಪಾಲನಮಾಡು" ಎಂದು ಹೇಳಿದನು

ಅದಕ್ಕೆ ಭರತನು ಬಹಳ ವಿನಯದಿಂದ-"ರಾಮಭದ್ರಾ! ನೀನೇ ನನಗೆ ಈ ಪ್ರಕಾರ ಆಜ್ಞೆಯನ್ನು ಮಾಡುವದರಿಂದ ನಾನು ನಿರುಪಾಯದಿಂದ ತಿರುಗಿ ಹೋಗುತ್ತೇನೆ. ಆದರೆ ನೀನು ಹದಿನಾಲ್ಕು ವರ್ಷ ವನವಾಸವನ್ನು ಭೋಗಿಸಿ ರಾಜ್ಯಕ್ಕೆ ತಿರುಗಿ ಬರುವತನಕ ನಾನು ನಿನ್ನ ಪಾದುಕಗಳನ್ನು ಸಿಂಹಾಸನದ ಮೇಲಿಟ್ಟು, ಮುನಿವೇಷದಿಂದಲೇ ನಂದಿಗ್ರಾಮದಲ್ಲಿದ್ದುಕೊಂಡು ನಿನ್ನ ಹೆಸರಿನಿಂದ ರಾಜ್ಯವನ್ನು ನಡೆಯಿಸುವೆನು" ಎಂದು ಹೇಳಿದನು. ಭರತನ ಈ ನಿಶ್ಚಯದ ಭಾಷಣವನ್ನು ಕೇಳಿ, ರಾಮನು ಅವನಿಗೆ ತನ್ನ ಪಾದುಕಗಳನ್ನು ಕೊಟ್ಟನು. ಹಾಗೂ ವಸಿಷ್ಠಮುನಿಗಳ ಪಾದದ ಮೇಲೆ ತನ್ನ ಮಸ್ತಕವನ್ನಿಟ್ಟು, ಎಲ್ಲರಿಗೂ ಅಯೋಧ್ಯೆಗೆ ತಿರುಗಿ ಹೋಗಬೇಕೆಂದು ಬೇಡಿಕೊಂಡನು ಈ ಎಲ್ಲ ಜನರು ರಾಮನ ಪಾದುಕಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಹೊರಟುಹೋದರು. ಭರತನು ಅಯೋಧ್ಯೆಗೆ ಹೋಗಿ ಮುಟ್ಟಿದ ಬಳಿಕ ರಾಮನ ಪಾದುಕಗಳನ್ನು ಸಿಂಹಾಸನದ ಮೇಲೆ ಸ್ಥಾಪಿಸಿ, ಶತ್ರುಘ್ನನಿಗೆ ರಾಜ್ಯಕಾರಭಾರವನ್ನು ಒಪ್ಪಿಸಿ, ತಾನು ಜಡೆಗಳನ್ನು ಬೆಳೆಯಿಸಿ, ವಲ್ಕಲಗಳನ್ನು ಧಾರಣಮಾಡಿ, ನಂದಿಗ್ರಾಮದಲ್ಲಿ ಬಂದು ಇರಹತ್ತಿದನು

---

# ೩. ಅರಣ್ಯಕಾಂಡ.

(ರಾಮ, ಲಕ್ಷ್ಮಣ ಮತ್ತು ಸೀತಾ ಈ ಮೂವರು ಚಿತ್ರಕೂಟ ಪರ್ವತವನ್ನು ಬಿಟ್ಟು ಅರಣ್ಯದಲ್ಲಿ ಹೋದ ಸಂಗತಿಯು, ರಾಮನು ಸೀತೆಯನ್ನು ಕಳೆದುಕೊಂಡ ಸಂಗತಿಯು, ಸೀತೆಯ ಶೋಧಾರ್ಥ ರಾಮಲಕ್ಷ್ಮಣರು ಅರಣ್ಯದಲ್ಲಿ ಸಂಚರಿಸುತ್ತ ಪಂಪಾಸರೋವರದ ತನಕ ಹೋದ ಸಂಗತಿಯು ಮೊದಲಾದ ಅರಣ್ಯದೊಳಗೆ ವರ್ತಿಸಿದ ಸಂಗತಿಗಳು ಈ ಕಾಂಡದಲ್ಲಿ ಹೇಳಲ್ಪಟ್ಟಿರುವದರಿಂದ ಇದಕ್ಕೆ "ಅರಣ್ಯಕಾಂಡ"ವೆಂಬ ಹೆಸರು ಬಂದಿರುತ್ತದೆ)

---

ಭರತನು ರಾಮನ ಪಾದುಕಗಳನ್ನು ತೆಗೆದುಕೊಂಡು ಅಯೋಧ್ಯೆಗೆ ತಿರುಗಿ ಹೋದ ತರುವಾಯ, ರಾಮ, ಲಕ್ಷ್ಮಣ ಮತ್ತು ಸೀತಾ ಈ ಮೂವರು ಕೆಲವು ದಿವಸ ಚಿತ್ರಕೂಟ ಪರ್ವತದಲ್ಲಿದ್ದು, ಆ ಮೇಲೆ ದಕ್ಷಿಣ ಕಡೆಗೆ ಹೋಗುವದಕ್ಕಾಗಿ ಹೊರಟರು ಅವರು ತಾವು ಹೊರಡುವ ಮುಂಚೆ ಚಿತ್ರಕೂಟ ಪರ್ವತದಲ್ಲಿಯ ಎಲ್ಲ ಋಷಿಗಳಿಗೆ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದುಕೊಂಡರು.

ಇವರು ಅರಣ್ಯದಲ್ಲಿ ಹೋಗುವಾಗ್ಗೆ ತಾವು ದಾರಿಯೊಳಗೆ ಕಂಡ ಯಾವತ್ತು ದುಷ್ಟ ರಾಕ್ಷಸರನ್ನು ಸಂಹರಿಸಿ ಮುನಿಜನರ ಭೀತಿಯನ್ನು ನಿರ್ಮೂಲವಮಾಡಿದರು ಮುಂದೆ ಇವರು ಅತ್ರಿ ಋಷಿಯ ಆಶ್ರಮಕ್ಕೆ ಹೋದರು ಅಲ್ಲಿ ಅತ್ರಿ ಋಷಿಯು ಅವರೆಲ್ಲರನ್ನು ಒಳ್ಳೇ ರೀತಿಯಿಂದ ಸತ್ಕರಿಸಿದನು ಅತ್ರಿ ಋಷಿಯ ಪತ್ನಿಯಾದ ಅನಸೂಯೆಯು ಸೀತೆಗೆ ಉತ್ತಮವಾದ ಮತ್ತು ಅಕ್ಷಯವಾದ ಕೆಲವು ಸೌಭಾಗ್ಯಾಲಂಕಾರಗಳನ್ನು ಕೊಟ್ಟಳು. ಅವರ ಆಶ್ರಮದಲ್ಲಿ ರಾಮ, ಸೀತಾ ಮತ್ತು ಲಕ್ಷ್ಮಣರು ಕೆಲವು ದಿವಸಗಳ ವರೆಗೆ ಇದ್ದುಕೊಂಡು ಮುಂದೆ

ದಂಡಕಾರಣ್ಯಕ್ಕೆ ಹೋದರು ಆ ದಂಡಕಾರಣ್ಯವು ದಟ್ಟವಾಗಿ ಬೆಳೆದಂಥ ಗಿಡಗಳ ಸಮೂಹದಿಂದ ಅತಿಶಯ ತುಂಬಿತ್ತು. ಈ ಅರಣ್ಯದಲ್ಲಿಯೂ ರಾಮನು ಅನೇಕ ಮಂದಿ ರಾಕ್ಷಸರನ್ನು ಕೊಂದನು ಅಲ್ಲಿ ವಿರಾಧನೆಂಬ ಒಬ್ಬ ರಾಕ್ಷಸನು ಸೀತೆಯನ್ನು ಒನ್ನಿಂದೊಮ್ಮೆ ಎತ್ತಿಕೊಂಡು ಓಡಿ ಹೋಗಲಾರಂಭಿಸಿದನು. ಆಗ ರಾಮನು ಆ ರಾಕ್ಷಸನ ಮೇಲೆ ಅನೇಕ ಬಾಣಗಳನ್ನು ಪ್ರಯೋಗ ಮಾಡಿದಾಗ್ಯೂ ಏನೂ ಉಪಯೋಗವಾಗಲಿಲ್ಲ ಆದುದರಿಂದ ರಾಮಲಕ್ಷ್ಮಣರಿಬ್ಬರೂ ಕೂಡಿ ಆ ರಾಕ್ಷಸನ ಎರಡೂ ಕೈಗಳನ್ನು ಮುರಿದುಹಾಕಿ, ಅವನನ್ನು ಒಂದು ಆಳವಾದ ತಗ್ಗಿನಲ್ಲಿ ನೂಕಿಸಿ ಕೊಟ್ಟು, ಸೀತೆಯನ್ನು ಕರೆದುಕೊಂಡು ಮುಂದಕ್ಕ ಹೊರಟು ಶರಭಂಗ, ಸುತೀಕ್ಷ್ಣ ಮೊದಲಾದ ಋಷಿಗಳ ಆಶ್ರಮಕ್ಕ ಹೋದರು ಅಲ್ಲಿ ಅವರು ಆ ಋಷಿಗಳಿಗೆ ನಮಸ್ಕರಿಸಿ, ಅವರ ಆಶೀರ್ವಾದಗಳನ್ನು ಪಡೆದುಕೊಂಡು ಅಗಸ್ತ್ಯ ಋಷಿಯ ಆಶ್ರಮಕ್ಕೆ ಬಂದರು. ಅಲ್ಲಿ ಅಗಸ್ತ್ಯ ಋಷಿಗೆ ಈ ತ್ರಿವರ್ಗರನ್ನು ನೋಡಿದ ಕೂಡಲೆ ಬಹಳ ಆನಂದವಾಯಿತು. ರಾಮನು ಈ ಮುನಿಶ್ರೇಷ್ಠನಿಗೆ ನಮಸ್ಕಾರಮಾಡಲು, ಅವನು ಸಂತುಷ್ಟನಾಗಿ ರಾಮನಿಗೆ ಅಮೌಲ್ಯವಾದ ವಿಷ್ಣುವಿನ ರತ್ನ-ಖಚಿತ ಧನುಷ್ಯವನ್ನೂ ಬ್ರಹ್ಮದೇವನ ದೇದೀಪ್ಯಮಾನವಾದ ಅಸ್ತ್ರಗಳನ್ನೂ ಕೊಟ್ಟು, ಇಂದ್ರನ ಎರಡು ಅಕ್ಷಯವಾದ ಬತ್ತಳಿಕೆಗಳನ್ನು ಕೊಟ್ಟನು. ಸೀತಯು ಅಗಸ್ತ್ಯ ಋಷಿಗೆ ನಮಸ್ಕಾರಮಾಡಿದಾಗ್ಗೆ ಅಗಸ್ತ್ಯ ಋಷಿಯು — "ನಿಮ್ಮ ಮೂರೂ ಮಂದಿಗೆ ಕಲ್ಯಾಣವಾಗಲಿ" ಎಂದು ಆಶೀರ್ವಾದವನ್ನು ಮಾಡಿ, ಅವರಿಗೆ ಹೋಗಲು ಅಪ್ಪಣೆಯನ್ನು ಕೊಟ್ಟನು. ಆ ಮೇಲೆ ಅವರು ಮೂರೂ

ಮುಂದಿ ನಾಶಿಕದ ಹತ್ತಿರವಿರುವ ಪಂಚವಟಿಗೆ ಬಂದು. ಗೋದಾವರಿ ತೀರದಲ್ಲಿ ತಮಗೆ ಇರಲಿಕ್ಕೆ ಯೋಗ್ಯವಾಗುವಂತೆ ಗಿಡಗಳ ಎಲೆಗಳಿಂದ ಒಂದು ಗುಡುಸಲವನ್ನು ಕಟ್ಟಿಕೊಂಡು ಅದರಲ್ಲಿ ಆನಂದದಿಂದ ಇರಲಿಕ್ಕೆ ಹತ್ತಿದರು. ಅದೇ ಸ್ಥಳದಲ್ಲಿ ಜಟಾಯು ಎಂಬ ಪಕ್ಷಿರಾಜನು ಅವರನ್ನು ಕಾಣಲಿಕ್ಕೆ ಬಂದನು ಅವನು ದಶರಥನ ಮಿತ್ರನಿದ್ದ ಕಾರಣ ಅವರಿದ್ದಲ್ಲಿಯೇ ಇರಲಿಕ್ಕೆ ಹತ್ತಿದನು ಈ ಪ್ರಕಾರ ಅವರು ಕೆಲವು ಕಾಲವನ್ನು ಸುಖದಿಂದ ಕಳೆಯಲಾಗಿ, ಶೂರ್ಪನಖಾ ಎಂಬ ದುಷ್ಟ ರಾಕ್ಷಸಿಯು ಅಲ್ಲಿಗೆ ಬಂದು, ರಾಮನಿಗೆ ತನ್ನನ್ನು ಮದುವೆಮಾಡಿಕೊಳ್ಳಬೇಕೆಂದು ಬಹಳ ಪರಿಯಿಂದ ಹೇಳಿಕೊಂಡಳು. ಅವಳು ದುಷ್ಟಳೂ ನೀತಿಭ್ರಷ್ಟಳೂ ಇರುವದನ್ನು ರಾಮನು ತಿಳಿದು, ಲಕ್ಷ್ಮಣನಿಗೆ—“ಇವಳು ಸ್ತ್ರೀಯಿರುವದರಿಂದ ಇವಳನ್ನು ಕೊಲ್ಲುವದು ಯೋಗ್ಯವಾಗಲಾರದು ಆದುದರಿಂದ ನೀನು ಇವಳ ಕಿವಿಮೂಗುಗಳನ್ನು ಕೊಯ್ದು, ಇವಳನ್ನು ವಿದ್ರೂಪಮಾಡಿ ಇಲ್ಲಿಂದ ಅಟ್ಟಿಕೊಡು” ಎಂದು ಅಪ್ಪಣೆಮಾಡಿದನು. ಆಗ ಲಕ್ಷ್ಮಣನು ರಾಮನ ಅಪ್ಪಣೆಯ ಮೇರೆಗೆ ಅವಳ ಕಿವಿಮೂಗುಗಳನ್ನು ಕೊಯ್ದು, ಅವಳನ್ನು ವಿದ್ರೂಪಮಾಡಿ ಅಟ್ಟಿಕೊಟ್ಟನು ಆದುದರಿಂದ ಅವಳು ತನ್ನ ಅಣ್ಣನಾದ ಖರನೆಂಬ ರಾಕ್ಷಸನ ಕಡೆಗೆ ಹೋಗಿ, ತನಗೆ ರಾಮಲಕ್ಷ್ಮಣರು ಮಾಡಿದ ದುರ್ದಶೆಯನ್ನು ಅವನ ಮುಂದೆ ಹೇಳಿ ಬಹಳವಾಗಿ ಪ್ರಲಾಪಿಸಿದಳು. ಕ್ಷುದ್ರಮಾನವರು ತನ್ನ ತಂಗಿಗೆ ಮಾಡಿದ ಅವಮಾನವನ್ನು ಕೇಳಿ ಖರನಿಗೆ ಬಹಳ ಸಿಟ್ಟು ಬಂದಿತು. ಆದುದರಿಂದ ಅವನು ರಾಮನನ್ನು ಕೊಲ್ಲುವದಕ್ಕಾಗಿ ಒಮ್ಮಿಂದೊಮ್ಮೆ ಹದಿನಾಲ್ಕು ಸಾವಿರ ರಾಕ್ಷಸರನ್ನು ಕಳುಹಿಸಿದನು. ಆಗ ರಾಮನು ಸೀತೆಯ ರಕ್ಷಣಾರ್ಥವಾಗಿ ಲಕ್ಷ್ಮಣ

ನನ್ನೂ ಜಟಾಯುವನ್ನೂ ಮನೆಯಲ್ಲಿ ಬಿಟ್ಟುಕೊಟ್ಟು ತಾನೊಬ್ಬನೇ ಆ ರಾಕ್ಷಸರ ಸಂಗಡ ಯುದ್ಧಮಾಡಲಿಕ್ಕೆ ಹೊರಟುಬಂದನು ಹಾಗೂ ಅವರ ಸಂಗಡ ಯುದ್ಧಮಾಡಿ ಅವರೆಲ್ಲರನ್ನೂ ಯಮ ಪುರಕ್ಕೆ ಅಟ್ಟಿದನು. ಆ ಮೇಲೆ ಖರ, ದೂಷಣ ಮತ್ತು ತ್ರಿಶಿರ ಎಂಬ ಮೂರು ಸ್ತುಂದಿ ರಾಕ್ಷಸರು ರಾಮನ ಸಂಗಡ ಯುದ್ಧಮಾಡ ಲಿಕ್ಕೆ ಹೊರಟುಬಂದರು. ರಾಮನು ಆ ಮೂವರನ್ನು ಸಹ ಕೂಡಲೆ ಸಂಹರಿಸಿಬಿಟ್ಟನು. ಈ ಯಾವತ್ತು ರಾಕ್ಷಸರು ಸಂಹಾರ ವಾದುದನ್ನು ಕಂಡು, ಶೂರ್ಪನಖಿಯು ಈ ವರ್ತಮಾನವನ್ನು ತನ್ನ ಅಣ್ಣನಾದ ರಾವಣನಿಗೆ ತಿಳುಹಿಸುವಗೋಸ್ಕರ ಲಂಕೆಗೆ ಹೊರಟುಹೋದಳು. ಹಾಗೂ ಅವಳು ಅವನ ಮುಂದೆ ತನ್ನ ಯಾವತ್ತು ದುಃಖವನ್ನು ತೋಡಿಕೊಂಡು — "ಒಬ್ಬ ಕ್ಷುದ್ರ ಮನು ಷ್ಯನು ನಮ್ಮ ಜನಸ್ಥಾನದೊಳಗಿನ ಯಾವತ್ತು ರಾಕ್ಷಸರನ್ನು ಸಂಹಾರ ಮಾಡಿದನು. ನೀನು ನನ್ನ ಅಭಿಮಾನವನ್ನೂ ನಮ್ಮ ಕುಲದ ಅಭಿ ಮಾನವನ್ನೂ ಹಿಡಿದು, ಆ ಮನುಷ್ಯನ ಮೇಲೆ ಸೇಡುತೀರಿಸಿಕೊಳ್ಳ ದಿದ್ದರೆ, ನಮ್ಮ ರಾಕ್ಷಸಕುಲದ ಮರ್ಯಾದೆಯು ಪೂರ್ಣವಾಗಿ ಹೊರಟುಹೋಗುವದು. ರಾಮನ ಹತ್ತರ ಒಬ್ಬ ಸುಂದರ ಸ್ತ್ರೀಯಿ ರುತ್ತಾಳೆ. ಅವಳನ್ನು ನೀನು ನಿನಗೋಸ್ಕರ ತೆಗೆದುಕೊಂಡು ಬಂದು ಇಟ್ಟುಕೋ. ಅವಳಂಥ ಸುಂದರಸ್ತ್ರೀಯನ್ನು ನೀನು ತೆಗೆದುಕೊಂಡು ಬಾರದಿದ್ದರೆ, ನಿನ್ನ ಪರಾಕ್ರಮಕ್ಕೂ ವೈಭವಕ್ಕೂ ಧಿಕ್ಕಾರವಿರಲಿ!" ಎಂದು ನುಡಿದಳು ರಾವಣನು ತನ್ನ ತಂಗಿಯಾದ ಶೂರ್ಪನಖಿಯ ಮಾತನ್ನು ಕೇಳಿ ಬಹಳ ಸಂತಾಪಗೊಂಡು, ರಾಮ ನನ್ನು ಪರಾಭವಪಡಿಸಬೇಕೆಂತಲೂ, ಸೀತೆಯನ್ನು ತೆಗೆದುಕೊಂಡು ಬರಬೇಕೆಂತಲೂ ತನ್ನ ಸಭೆಯೊಳಗಿಂದ ಹೊರಟು ಮಾರೀಚನೆಂಬ

ರಾಕ್ಷಸನ ಆಶ್ರಮಕ್ಕೆ ಹೋಗಿ– "ಮಾರೀಚನೇ, ಯಾವನೋ ಒಬ್ಬ ಮನುಷ್ಯನು ತನ್ನ ಸುಂದರಹೆಂಡತಿಯನ್ನೂ ತಮ್ಮನನ್ನೂ ಕೂಡಿ ಕೊಂಡು ಪಂಚವಟಿಗೆ ಬಂದು ಇರಹತ್ತಿದ್ದು, ಅವನು ನಮ್ಮ ಜನಸ್ಥಾನದೊಳಗಿನ ಯಾವತ್ತು ರಾಕ್ಷಸರನ್ನು ಸಂಹರಿಸಿರುತ್ತಾನೆ. ಆದುದರಿಂದ ನಾನು ಆ ಉಭಯ ಅಣ್ಣತಮ್ಮಂದಿರನ್ನು ಕೊಂದು, ಆ ಸುಂದರಸ್ತ್ರೀಯನ್ನು ತರಲಿಕ್ಕೆ ಹೊರಟಿದ್ದೇನೆ. ಈ ಕೆಲಸಕ್ಕೆ ನೀನು ನನಗೆ ಸಹಾಯವನ್ನು ಮಾಡಲಿಕ್ಕೆ ನಡೆ" ಎಂದು ಹೇಳಿದನು. ಆಗ ಮಾರೀಚನು ರಾವಣನಿಗೆ - "ಮಿತ್ರಾ, ನನಗೆ ರಾಮನ ಅಂಜಿಕೆಯು ಬಹಳ ಇರುವದು ಅವನ ಉಸಾಬರಿಗೆ ಹೋಗುವದು ನನಗಂತೂ ಇಷ್ಟವಾಗಿ ತೋರುವದಿಲ್ಲ. ನೀನು ಮತ್ತು ನಮ್ಮ ಯಾವತ್ತು ರಾಕ್ಷಸಕುಲವು ನಾಶವಾಗಬಾರದೆಂದು ನಿನ್ನ ಅಪೇಕ್ಷ ಯಿದ್ದಲ್ಲಿ, ನೀನು ಅವನ ಗೊಡವೆಗೆ ಹೋಗಬೇಡವೆಂದು ನಾನು ನಿನಗೆ ಕೈಜೋಡಿಸಿ ಬೇಡಿಕೊಳ್ಳುತ್ತೇನೆ" ಎಂದು ಹೇಳಿದನು. ಮಾರೀಚನು ಪರಾಕ್ರಮಿಯು ಇದ್ದಾಗ್ಯೂ ಈ ಪ್ರಕಾರ ಹೇಡಿತನದ ಉತ್ತರಕೊಟ್ಟದ್ದು ರಾವಣನಿಗೆ ಏನೂ ಸಹನವಾಗಲಿಲ್ಲ. ಆದುದರಿಂದ ರಾವಣನು ಅವನ ಮೇಲೆ ಬಹಳ ಸಿಟ್ಟಿಗೆದ್ದನು. ರಾವಣನು ಮಾರೀಚನಿಗೆ– "ನಿನ್ನ ಪರಾಕ್ರಮದ ಬಗ್ಗೆ ನನಗೆ ಬಹಳ ವಿಶ್ವಾಸವಿದ್ದ ಕಾರಣ ನಾನು ನಿನ್ನ ಸಹಾಯವನ್ನು ಕೇಳಲಿಕ್ಕೆ ಬಂದೆನು. ಹೀಗಿದ್ದು ನಿನಗೆ ಇಂಥ ಹೇಡಿತನದ ಉತ್ತರವನ್ನು ಕೊಡಲಿಕ್ಕೆ ಹೇಗೆ ನಾಚಿಕೆಯು ಬರಲಿಲ್ಲ? ನೀನು ನನಗೆ ಸಹಾಯ ಮಾಡಲಿಕ್ಕೆ ನನ್ನ ಸಂಗಡ ಬಾರದಿದ್ದರೆ, ನಾನು ಇಲ್ಲಿಯೇ ನಿನ್ನ ಪ್ರಾಣವನ್ನು ತೆಗೆದುಕೊಳ್ಳುತ್ತೇನೆ" ಎಂದು ಗದ್ದರಿಸಿ ಮಾತಾಡಿದನು ಆ ಮೇಲೆ "**ವಿನಾಶಕಾಲೇ ವಿಪರೀತ ಬುದ್ಧಿಃ**" ಎಂಬ

ಉಕ್ತಿಯಂತೆ ರಾವಣನಿಗೆ ಅವನ ವಿನಾಶಕಾಲವು ಸಮೀಪಿಸಿದ್ದರಿಂದ ಲೇ ಕೆಟ್ಟಬುದ್ಧಿಯು ಹುಟ್ಟಿರುತ್ತದೆಂದು ಮಾರೀಚನು ತನ್ನ ಮನಸ್ಸಿನಲ್ಲಿ ತಿಳಿದುಕೊಂಡು, ಅವನ ಕೂಡ ಹೆಚ್ಚಿಗೆ ಏನೂ ಮಾತಾಡದೆ, ಸುಮ್ಮನೆ ಅವನ ಸಂಗಡ ಹೊರಟುಹೋದನು. ಆ ಬಳಿಕ ಅವರಿಬ್ಬರೂ ಕೂಡಿ ಪಂಚವಟಿಗೆ ಬಂದರು. ಅಲ್ಲಿ ರಾವಣನು ಮಾರೀಚನಿಗೆ — "ನೀನು ಸುವರ್ಣ ಜಿಂಕೆಯ ವೇಷವನ್ನು ಧರಿಸಿ ಸೀತೆಯ ಮುಂದೆ ಹೋಗಿ ಸುಳಿದಾಡು. ಅಂದರೆ ಅವಳು ನಿನ್ನನ್ನು ಹಿಡಿದುಕೊಡೆಂದು ರಾಮನಿಗೆ ಆಗ್ರಹ ಮಾಡುವಳು ಆಗ ಅವನು ನಿನ್ನನ್ನು ಹಿಡಿಯಲಿಕ್ಕೆ ನಿನ್ನ ಬೆನ್ನುಹತ್ತಿ ಬರುವನು. ಆ ಬಳಿಕ ನಾನು ಗೋಸಾವಿಯ ವೇಷದಿಂದ ರಾಮನ ಪರ್ಣಕುಟಿಗೆ ಹೋಗಿ ಸೀತೆಯನ್ನು ಎತ್ತಿಕೊಂಡು ಬರುವೆನು" ಎಂದು ಹೇಳಿದನು. ಅದಕ್ಕ ಮಾರೀಚನು ಒಪ್ಪಿಕೊಂಡು, ತಾನು ಸುವರ್ಣ ಜಿಂಕೆಯ ವೇಷವನ್ನು ಧರಿಸಿ, ಸೀತಯ ಮುಂದೆ ಹೋಗಿ ಸುಳಿದಾಡಿದನು. ಸೀತೆಯು ಆ ಸುವರ್ಣ ಜಿಂಕೆಯನ್ನು ನೋಡಿ, ಅದರ ಮೇಲೆ ಮೋಹಪಟ್ಟು, ತಾನು ಅದನ್ನು ಜೋಕೆಮಾಡಬೇಕೆಂದು ಅಪೇಕ್ಷಿಸಿ, ರಾಮನಿಗೆ — "ಪ್ರಾಣನಾಥಾ, ನೀವು ಈ ಜಿಂಕೆಯನ್ನು ಹೇಗಾದರೂ ಮಾಡಿ ಹಿಡಿದುಕೊಂಡು ಬನ್ನಿರಿ" ಎಂದು ಹೇಳಿದಳು. ಇದರಿಂದ ರಾಮನು ಅದನ್ನು ಹಿಡಿದುತರುವದಕ್ಕಾಗಿ ಅದರ ಬೆನ್ನುಹತ್ತಿ ಬಹಳ ದೂರ ಹೋದನು. ಆದರೂ ಅದು ಅವನ ಕೈಗೆ ಸಿಗಲಿಲ್ಲ. ಆಗ ಅವನು ಅದು ಜೀವಂತವಿರುವಾಗ ತನ್ನ ಕೈಗೆ ಸಿಗುವದಿಲ್ಲೆಂದು ನೋಡಿ, ಅದನ್ನು ಕೊಲ್ಲುವದಕ್ಕಾಗಿ ಅದರ ಮೇಲೆ ಒಂದು ಬಾಣವನ್ನು ಬಿಟ್ಟನು. ಆಗ ಆ ಜಿಂಕೆಯು ಪ್ರಾಣಬಿಟ್ಟಿತು. ಆದರೆ ಅದು ಪ್ರಾಣಬಿಡುವ ಮುಂಚೆ "ಹಾ! ಸೀತೆಯೇ!" ಎಂದು ಬಹಳ

ದುಃಖದ ಸ್ವರವನ್ನು ತೆಗೆದು, ಕೇವಲ ರಾಮನ ಸ್ವರದಂತೆಯೇ ಮೋಸದಿಂದ ಒದರಿದ ಕಾರಣ ಸೀತೆಯು ಅದನ್ನು ಕೇಳಿ ಭಯ ಪಟ್ಟು, ರಾಮನು ಏನೋ ಸಂಕಟದಲ್ಲಿ ಬಿದ್ದಿರುತ್ತಾನೆಂದು ತಿಳಿದು ಕೊಂಡು, ಅವನ ಸಹಾಯಕ್ಕಾಗಿ ಹೋಗೆಂದು ಲಕ್ಷ್ಮಣನಿಗೆ ಸೂಚಿಸಿದಳು ಆಗ ಲಕ್ಷ್ಮಣನು — "ರಾಮನಿಗೆ ತ್ರಿಲೋಕದ ಲ್ಲಿಯೂ ಭೀತಿಯು ಇಲ್ಲ. ರಾಮನು ಸುರಕ್ಷಿತದಿಂದಿದ್ದಾನೆ. ಇದೆಲ್ಲ ರಾಕ್ಷಸರ ಮೋಸವೆಂಬಂತೆ ಕಾಣುತ್ತದೆ" ಎಂದು ಸೀತೆಗೆ ಹೇಳಿ, ಆಕೆಯನ್ನು ಸಮಾಧಾನಪಡಿಸಲಿಕ್ಕೆ ಯತ್ನಿಸಿದನು ಆದರೆ ಸೀತೆಯು ಅವನಿಗೆ ತಿರಸ್ಕರಿಸಿ ಮಾತಾಡಿದ್ದರಿಂದ ಅವನು ಸೀತೆಯ ಆಗ್ರಹದಗೋಸ್ಕರ ನಿರುಪಾಯದಿಂದ ಅವಳೊಬ್ಬಳನ್ನೇ ಅಲ್ಲಿ ಬಿಟ್ಟುಕೊಟ್ಟು, ಆ ಗುಡುಸಲದ ಬಾಗಿಲದ ಮುಂದೆ ತನ್ನ ಧನುಷ್ಯ ದಿಂದ ಒಂದು ಗೆರೆಯನ್ನು ಕೊರೆದು — "ಅಕ್ಕಾ, ನಿನಗೆ ಬೇಕಾ ದಂಥ ಪ್ರಸಂಗವು ಬಂದಾಗ್ಯೂ ನೀನು ಈ ಗೆರೆಯನ್ನು ದಾಟ ಹೊರಗೆ ಬರಬೇಡ" ಎಂದು ಹೇಳಿ, ತಾನು ರಾಮನ ಸಹಾಯಾ ರ್ಥವಾಗಿ ಹೊರಟು ಹೋದನು ಆ ಮೇಲೆ ರಾವಣನು ಗೋಸಾ ವಿಯ ವೇಷವನ್ನು ಧರಿಸಿ, ಸೀತೆಯ ಬಳಿಗೆ ಭಿಕ್ಷೆಯನ್ನು ಬೇಡ ಲಿಕ್ಕೆ ಬಂದನು ಸೀತೆಯು ಆ ಗೋಸಾವಿಗೆ ಭಿಕ್ಷೆಯನ್ನು ಹಾಕು ವದಕ್ಕಾಗಿ ಲಕ್ಷ್ಮಣನು ಕೊರೆದ ಗೆರೆಯ ಹೊರಗೆ ಬಂದಕೂಡಲೆ ರಾವಣನು ಅವಳನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಂಡು ಓಡಿ ಹೋದನು ಆಗ ಸೀತೆಯು ತನಗೆ ಲಕ್ಷ್ಮಣನು ಹೇಳಿದ ಸಂಗತಿ ಯನ್ನು ನೆನಪುಮಾಡಿಕೊಂಡು ಬಹಳ ಅಳಲಾರಂಭಿಸಿದಳು ಇಷ್ಟ ರಲ್ಲಿ ಸೀತೆಯ ರಕ್ಷಣಮಾಡಲಿಕ್ಕೆ ಜಟಾಯುವು ಬಂದಿತು. ಆದರೆ ರಾವಣನು ಜಟಾಯುವಿನ ರೆಕ್ಕೆಗಳನ್ನು ಮುರಿದುಹಾಕಿ ಅವನ್ನು

ಅರಜೀವಮಾಡಿ ಲಂಕೆಯ ಕಡೆಗೆ ಹೊರಟು ಹೋದನು ಇತ್ತ ರಾಮನು ಜಿಂಕೆಯ ರೂಪವನ್ನು ಧರಿಸಿದ್ದ ಮಾರೀಚರಾಕ್ಷಸನನ್ನು ಕೊಂದು ತನ್ನ ಗುಡುಸಲದ ಕಡೆಗೆ ಹೊರಟು ಬರುತ್ತಿರಲು, ದಾರಿಯಲ್ಲಿ ಲಕ್ಷ್ಮಣನನ್ನು ಕಂಡನು ಆಗ ಅಲ್ಲಿ ಏನಾದರೂ ಮೋಸವಾಗಿರಲಿಕ್ಕೇಬೇಕೆಂದು ರಾಮನಿಗೆ ತೋಚಿತು ಆದುದರಿಂದ ಉಭಯ ಅಣ್ಣತಮ್ಮಂದಿರು ಲಗಬಗೆಯಿಂದ ತಮ್ಮ ಗುಡುಸಲಕ್ಕೆ ಬಂದು ನೋಡುವಷ್ಟರಲ್ಲಿ ಸೀತೆಯು ಅಲ್ಲಿ ಇದ್ದಿಲ್ಲ! ಅವರು ಆ ಗುಡುಸಲದ ಸುತ್ತಲು ಸೀತೆಯನ್ನು ಬೇಕಾದಷ್ಟು ಶೋಧಿಸಿದರು. ಆದರೆ ಅವಳ ಶೋಧವು ಹತ್ತಲಿಲ್ಲ. ಆಗ ರಾಮನು ಬಹಳ ಶೋಕವನ್ನು ಮಾಡಲಿಕ್ಕೆ ಹತ್ತಲು, ಲಕ್ಷ್ಮಣನು ಅವನಿಗೆ ಸಮಾಧಾನವನ್ನು ಮಾಡಿದನು. ಕೆಲವು ಹೊತ್ತಿನ ಮೇಲೆ ಅವರಿಬ್ಬರೂ ಸೀತೆಯ ಶೋಧಾರ್ಥ ಬರುತ್ತಿರಲಾಗಿ, ಕಂಠಗತಪ್ರಾಣನಾಗಿ ಬಿದ್ದುಕೊಂಡಿದ್ದ ಜಟಾಯುವು ಯಾವತ್ತುವೃತ್ತಾಂತವನ್ನು ಹೇಳಿ, ತಾನು ಸೀತೆಯನ್ನು ರಾವಣನ ಕೈಯಿಂದ ಬಿಡಿಸಲಿಕ್ಕೆ ಪ್ರಯತ್ನಮಾಡಿದಾಗ್ಗೆ ತನಗೆ ಈ ದುರ್ದಶೆಯುಂಟಾಯಿತೆಂದು ಹೇಳಿ ಪ್ರಾಣಬಿಟ್ಟಿತು ಆ ಬಳಿಕ ರಾಮಲಕ್ಷ್ಮಣರು ಜಟಾಯುವಿನ ಆಪ್ತೇಷ್ಟರಂತೆ ಅವನ ಉತ್ತರಕ್ರಿಯೆಗಳನ್ನು ಮಾಡಿ ಸೀತೆಯ ಶೋಧವನ್ನು ಮಾಡುವದಕ್ಕಾಗಿ ಮುಂದೆ ಸಾಗಿದರು.

## ೪. ಕಿಷ್ಕಿಂಧಾಕಾಂಡ.

(ಪಂಪಾಸರೋವರದ ಸಮೀಪವಿರುವ ಋಷ್ಯಮೂಕ ಪರ್ವತದ ಮೇಲೆ ರಾಮ ಮತ್ತು ಸುಗ್ರೀವರ ಮಿತ್ರತ್ವವಾದನಂತರ ಸುಗ್ರೀವ ಮತ್ತು ವಾಲಿ ಈ ಉಭಯರೊಳಗೆ ಯುದ್ಧವು ನಡೆದು ಆ ಯುದ್ಧದಲ್ಲಿ ವಾಲಿಯು

ಮರಣಹೊಂದಿದನು ಇದರಿಂದ ಸುಗ್ರೀವನಿಗೆ ಕಿಷ್ಕಿಂಧಾರಾಜ್ಯವು ದೊರಕಿತು. ಹಾಗೂ ಸುಗ್ರೀವನು ಸೀತೆಯ ಶೋಧಾರ್ಥ ಯಾವತ್ತು ದಿಕ್ಕುಗಳಿಗೆ ವಾನರರನ್ನು ಕಳಿಸಿದನು — ಮೊದಲಾದ ಕಿಷ್ಕಿಂಧೆಯೊಳಗೆ ನಡೆದ ಸಂಗತಿಗಳನ್ನು ಈ ಕಾಂಡದಲ್ಲಿ ಹೇಳಿರುವದರಿಂದ ಇದಕ್ಕೆ "ಕಿಷ್ಕಿಂಧಾಕಾಂಡ" ವೆಂಬ ಹೆಸರು ಬಂದಿರುತ್ತದೆ)

---

ಸೀತೆಯನ್ನು ಶೋಧವಮಾಡುವದಕ್ಕಾಗಿ ರಾಮಲಕ್ಷ್ಮಣರು ಅಡವಿಯಲ್ಲಿಯೂ, ಗುಡ್ಡದಲ್ಲಿಯೂ ಸಂಚರಿಸುತ್ತಿರುವಾಗ್ಗೆ ಅವರು ಒಂದು ಸಾರೆ ಕಬಂಧನೆಂಬ ರಾಕ್ಷಸನನ್ನು ಕಂಡರು. ಆಗ ಲಕ್ಷ್ಮಣನು ಆ ರಾಕ್ಷಸನ ಕೈಗಳನ್ನು ಮುರಿದು ಅವನನ್ನು ಕೊಂದು ಹಾಕಿದನು. ಆ ಬಳಿಕ ಅವರಿಬ್ಬರೂ ಕೂಡಿ ಆ ರಾಕ್ಷಸನ ಶವವನ್ನು ಚಿತೆಯ ಮೇಲೆ ಇಟ್ಟು ಅದಕ್ಕೆ ಅಗ್ನಿಸಂಸ್ಕಾರಮಾಡಿದರು. ಆಗ ಆ ಚಿತೆಯೊಳಗಿಂದ ಒಬ್ಬ ದಿವ್ಯಪುರುಷನು ಹೊರಟುಬಂದು, ರಾಮನ ಪಾದಗಳ ಮೇಲೆ ತನ್ನ ತಲೆಯನ್ನಿರಿಸಿ — "ಎಲೈ ಮಹಾಪುರುಷನೇ! ನೀನು ನಿನ್ನ ಸತಿಯನ್ನು ಶೋಧಮಾಡುವುದಕ್ಕಾಗಿ ಉತ್ತರ ದಿಕ್ಕಿನ ಕಡೆಗೆ ಹೋಗು ಮುಂದೆ ನಿನಗೆ ಪಂಪಾನದಿಯು ಹತ್ತುವದು ಅಲ್ಲಿ ನೀನು ಸುಗ್ರೀವನ ಮಿತ್ರತ್ವವನ್ನು ಸಂಪಾದಿಸು. ಅಂದರೆ ಅವನು ನಿನ್ನ ಕೆಲಸಕ್ಕೆ ಬಹಳ ಸಹಾಯಮಾಡುವನು. ನಿನ್ನ ಕೈಯಿಂದ ನನಗೆ ಮರಣವು ಬಂದುದಕ್ಕಾಗಿ ನನಗೆ ಉತ್ತಮ ಗತಿಯು ದೊರಕಿರುವದು. ಇನ್ನುಮೇಲೆ ನಾನು ಸ್ವರ್ಗಲೋಕಕ್ಕೆ ಹೋಗುವೆನು" ಎಂದುಹೇಳಿ ಹೊರಟುಹೋದನು.

ಬಳಿಕ ರಾಮಚಂದ್ರನು ತನ್ನ ತಮ್ಮನನ್ನು ಕೂಡಿಕೊಂಡು, ಸೀತೆಯನ್ನು ಶೋಧಮಾಡುವದಕ್ಕಾಗಿ ತೀವ್ರದಿಂದ ಹೊರಟು ಪಂಪಾತೀರಕ್ಕೆ ಬಂದು ತಲ್ಪಿದನು. ಪಂಪಾಸರೋವರವು ಬಹಳ

ರಮಣೀಯವಿತ್ತು. ಆದರೆ ದುಃಖಾತಿಶಯದಲ್ಲಿದ್ದ ರಾಮನಿಗೆ ಅದರ ಕೌತುಕವು ಏನೂ ತೋರಲಿಲ್ಲ. ಋಷ್ಯಮೂಕ ಪರ್ವತದ ಮೇಲೆ ಸುಗ್ರೀವನು ವಾಲಿಯ ಭಯದಿಂದ ತನ್ನ ಮಂತ್ರಿ ಸಹ ವರ್ತಮಾನ ಇರುತ್ತಿದ್ದನು. ಅವರೆಲ್ಲರು ಈ ತೇಜಃಪುಂಜರಾದ ಬಂಧುಗಳನ್ನು ನೋಡಿ, ಇವರು ಯಾರೆಂಬುದನ್ನು ತಿಳಿದುಕೊಂಡು ಬರಲಿಕ್ಕೆ ಹನುಮಂತನನ್ನು ಅವರ ಕಡೆಗೆ ಕಳುಹಿಸಿಕೊಟ್ಟರು ಆಗ ಹನುಮಂತನು ಅವರ ಕಡೆಗೆ ಬಂದು — "ನೀವು ಯಾರು? ನೀವು ಇಲ್ಲಿ ಬಂದ ಉದ್ದಿಶ್ಯವೇನು? ನಮ್ಮ ಸ್ವಾಮಿಯಾದ ಸುಗ್ರೀವನು ಇಲ್ಲಿಯೇ ಸಮೀಪದಲ್ಲಿರುತ್ತಾನೆ. ಅವನಿಗೆ ನಿಮ್ಮನ್ನು ಕಾಣ ಬೇಕೆಂಬ ಅಪೇಕ್ಷೆಯು ಬಹಳವಿರುತ್ತದೆ. ಅವನು ಸೂರ್ಯಪುತ್ರ ನಿದ್ದು ಬಹಳ ಪರಾಕ್ರಮಶಾಲಿಯು ಇರುತ್ತಾನೆ. ಆದುದರಿಂದ ನೀವು ನನ್ನ ಸಂಗಡ ನಡೆಯಿರಿ" ಎಂದು ಹೇಳಿದನು. ಕಬಂಧನಿಂದ ಹಿಂದಕ್ಕೆ ಕೇಳಿದ್ದ ಹೆಸರನ್ನು ಹನುಮಂತನ ಬಾಯಿಂದ ಈಗ ಕೇಳಿಯೂ, ಹನುಮಂತನ ಸಭ್ಯ ಸುಶೀಲ ವರ್ತನವನ್ನು ನೋಡಿ ಯೂ ರಾಮನು ಆನಂದಬಟ್ಟು ಲಕ್ಷ್ಮಣನೊಡನೆ ಹನುಮಂತನ ಸಂಗಡ ಹೋಗಲಿಕ್ಕೆ ಸಿದ್ಧನಾದನು. ಆಗ ಆ ವೀರ ಹನುಮಂತನು ಇವರಿಬ್ಬರನ್ನೂ ತನ್ನ ಕುತ್ತಿಗೆಯ ಮೇಲೆ ಕುಳ್ಳಿರಿಸಿಕೊಂಡು ಋಷ್ಯ ಮೂಕ ಪರ್ವತದ ಮೇಲೆ ಸುಗ್ರೀವನಿದ್ದೆಡೆಗೆ ತಂದು ಇಳಿಸಿದನು ಬಳಿಕ ರಾಮನು ತನ್ನ ಯಾವತ್ತು ವೃತ್ತಾಂತವನ್ನು ಸುಗ್ರೀವನಿಗೆ ತಿಳುಹಿಸಿದನು ಸುಗ್ರೀವನಾದರೂ ತನ್ನ ಯಾವತ್ತು ವೃತ್ತಾಂತ ವನ್ನು ರಾಮನಿಗೆ ಹೇಳಿದನು. ಸುಗ್ರೀವನು ರಾಮನಿಗೆ ತನ್ನ ವೃತ್ತಾಂತವನ್ನು ತಿಳುಹಿಸುವಾಗ್ಗೆ "ನನ್ನ ಅಣ್ಣನಾದ ವಾಲಿಯು ನನ್ನ ರಾಜ್ಯವನ್ನು ಬಲಾತ್ಕಾರದಿಂದ ಕಸದುಕೊಂಡು ನನ್ನ ಹೆಂಡತಿ

ಯನ್ನು ತನ್ನ ಹತ್ತಿರ ಒಯ್ದು ಇಟ್ಟುಕೊಂಡಿದ್ದಾನೆ. ಒಮ್ಮೆ ಅವನು ನನ್ನನ್ನು ಕೊಲ್ಲಲಿಕ್ಕೆ ಸಹ ಬಂದಿದ್ದನು" ಎಂಬದಾಗಿ ಹೇಳಿದನು ರಾಮನು ಸುಗ್ರೀವನ ಬಾಯಿಂದ ಅವನ ಯಾವತ್ತು ವೃತ್ತಾಂತವನ್ನು ಕೇಳಿಕೊಂಡು ಅವನು ತನ್ನ ಸಮದುಃಖಿಯೆಂದು ನೋಡಿ ಸುಗ್ರೀವನ ಮೇಲೆ ಬಹಳ ಪ್ರೀತಿಮಾಡಹತ್ತಿದನು. **"ಸಮಾನಶೀಲೆ ವ್ಯಸನೇಷು ಸಖ್ಯಂ"** ಎಂಬಂತೆ ಉಭಯತರೊಳಗೆ ತೀವ್ರವೇ ಮಿತ್ರತ್ವವಾಯಿತು. ರಾಮನು ವಾಲಿಯನ್ನು ಕೊಂದು ಸುಗ್ರೀವನ ಹೆಂಡತಿಯನ್ನು ಸುಗ್ರೀವನಿಗೆ ದೊರಕಿಸಿಕೊಡಬೇಕೆಂತಲೂ, ಸುಗ್ರೀವನು ರಾಮನ ಹೆಂಡತಿಯಾದ ಸೀತೆಯನ್ನು ಶೋಧಮಾಡಿ, ಅವಳನ್ನು ಕರೆದುಕೊಂಡು ಬರಲಿಕ್ಕೆ ರಾಮನಿಗೆ ಸಹಾಯಮಾಡಬೇಕೆಂತಲೂ ಉಭಯತರು ತಮ್ಮೊಳಗೆ ಗೊತ್ತು ಮಾಡಿಕೊಂಡರು ಆ ಬಳಿಕ ಅವರು ವಾಲಿಯನ್ನು ಕೊಲ್ಲುವ ಸಿದ್ಧತೆಯನ್ನು ನಡೆಸಿದರು ಇಷ್ಟರಲ್ಲಿ ಹನುಮಂತನಿಗೆ ಒಬ್ಬ ಸ್ತ್ರೀಯು ತನ್ನ ಮೈಮೇಲಿನ ಆಭರಣಗಳನ್ನು ಬಿಚ್ಚಿ, ಗಂಟುಕಟ್ಟಿ, ಆ ಗಂಟನ್ನು ತನ್ನ ಕಡೆಗೆ ಸ್ವಲ್ಪದಿವಸಗಳ ಹಿಂದ ಒಗೆದದ್ದು ನೆನಪಾಗಲು, ಅವನು ಆ ಆಭರಣಗಳನ್ನು ರಾಮನ ಮುಂದೆ ತಂದಿಟ್ಟು—"ಇವು ನಿನ್ನ ಪತ್ನಿಯ ಆಭರಣಗಳೋ? ನೋಡು" ಎಂದು ಕೇಳಿದನು. ರಾಮನು ಅವುಗಳನ್ನು ನೋಡಿ, ಅವು ಸೀತೆಯ ಆಭರಣಗಳೆಂದು ಗುರುತುಹಿಡಿದು ಬಹಳ ಶೋಕಮಾಡಹತ್ತಿದನು. ಆಗ ಎಲ್ಲರು—"ಎಲೈ ವೀರಶ್ರೇಷ್ಠನೇ! ನೀನು ಎಳ್ಳಷ್ಟಾದರೂ ಶೋಕಿಸಬೇಡ. ನಾವು ಬೇಗನೆ ಸೀತೆಯನ್ನು ಶೋಧಿಸಿಕೊಂಡು ಬರುವೆವು" ಎಂದು ಹೇಳಿದರು. ಮುಂದೆ ಕೆಲವು ದಿವಸಗಳ ತರುವಾಯ ಸುಗ್ರೀವನು ವಾಲಿಯನ್ನು ಯುದ್ಧಕ್ಕೆ ಕರೆ

ದನು. ಆಗ ವಾಲಿಯು ತನ್ನ ಯಾವತ್ತು ಸಿದ್ಧತೆಯನ್ನು ಮಾಡಿ ಕೊಂಡು ಸುಗ್ರೀವನ ಕೂಡ ಯುದ್ಧಮಾಡಲಿಕ್ಕೆ ಬಂದನು. ಉಭಯ ತರೊಳಗೆ ಕೆಲವು ಹೊತ್ತು ತುಮುಲ ಯುದ್ಧವು ನಡೆಯಿತು. ಆಗ ಸುಗ್ರೀವನ ಕೈಯಿಂದ ವಾಲಿಯು ಸಾಯುವದಿಲ್ಲೆಂಬದನ್ನು ನೋಡಿ, ರಾಮನು ತನ್ನ ದಿವ್ಯಬಾಣದಿಂದ ವಾಲಿಯನ್ನು ಕೊಂದು, ಅವನ ರಾಜ್ಯವನ್ನು ಸುಗ್ರೀವನಿಗೆ ಕೊಡಿಸಿದನು. ಮುಂದೆ ಮಳೆಗಾಲವು ಮುಗಿದ ಬಳಿಕ ಸುಗ್ರೀವನು ದೊಡ್ಡ ದೊಡ್ಡ ಪರಾಕ್ರಮಿಗಳಾದ ವಾನರರನ್ನು ಸೀತೆಯ ಶೋಧಮಾಡಿಕೊಂಡು ಬರುವದಕ್ಕಾಗಿ ಹನು ಮಂತನಗೂಡ ಕಳುಹಿಸಿಕೊಟ್ಟನು. ಆ ಎಲ್ಲ ವಾನರರು ಬೇರೆ ಬೇರೆ ಧಿಕ್ಕುಗಳಿಗೆ ಹೋದರು. ಹನುಮಂತನೂ ಕಲವು ಬಲಾಢ್ಯ ವಾನರರೂ ಮಾತ್ರ ದಕ್ಷಿಣದಿಕ್ಕಿಗೆ ಹೋದರು. ದಕ್ಷಿಣದಿಕ್ಕಿಗೆ ಹೋಗಿದ್ದ ವಾನರರೆಲ್ಲರು ತಾವು ಬಹಳ ರೀತಿಯಿಂದ ಶೋಧಮಾದಿ ದಾಗ್ಯೂ ಸೀತೆಯ ಶೋಧವು ಇನ್ನೂ ಆಗಲಿಲ್ಲವೆಂದು ನಿರಾಶೆ ಪಟ್ಟು, ಮಹೇಂದ್ರ ಪರ್ವತದ ಮೇಲೆ ಬಂದು ಕುಳಿತು— "ನಾವು ಈ ಪ್ರಕಾರ ಅಪಯಶಸ್ವಿಯಾಗಿ ತಿರುಗಿ ಹೋಗುವದಕ್ಕಿಂತ ಇದೇ ಸ್ಥಳದಲ್ಲಿ ಉಪವಾಸಬಿದ್ದು ಪ್ರಾಣತ್ಯಾಗಮಾಡುವುದು ಲೇಸು". ಎಂದು ತಮ್ಮೊಳಗೆ ಮಾತಾಡಿದರು. ಈ ಅವರ ನಿರಾಶಯ ಭಾಷಣವನ್ನು ಅಲ್ಲಿಯೇ ಸಮೀಪದಲ್ಲಿ ಕುಳಿತಿದ್ದ ಜಟಾಯುವಿನ ಸಹೋದರನಾದ ಸಂಪಾತಿಯು ಕೇಳಿ—"ಎಲೈ ಬಲಾಢ್ಯ ವಾನರ ವೀರರೇ! ನೀವು ಈ ಪ್ರಕಾರ ನಿರಾಶೆಯಾಗಬೇಡಿರಿ. ಸೀತೆಯು ಎಲ್ಲಿರುವಳೆಂಬದನ್ನು ನಾನು ನಿಮಗೆ ಹೇಳಿಕೊಡುತ್ತೇನೆ ರಾವಣ ನೆಂಬ ಮಹಾ ಪರಾಕ್ರಮಿಯಾದ ರಾಕ್ಷಸನು ಲಂಕಯಲ್ಲಿ ರಾಜ್ಯ ವನ್ನಾಳುತ್ತಿದ್ದು, ಅವನು ಸೀತೆಯನ್ನು ತೆಗೆದುಕೊಂಡು ಹೋಗಿ

ಅಶೋಕವನದಲ್ಲಿ ಇಟ್ಟಿರುತ್ತಾನೆ. ಸೀತೆಯು ಸುಖರೂಪದಿಂದಿರುತ್ತಾಳೆ. ನಿಮ್ಮಲ್ಲಿ ಯಾರಾದರೂ ಈ ಮಹಾಸಾಗರವನ್ನು ದಾಟಿ ಹೋದರೆ ತೀವ್ರವಾಗಿಯೇ ನಿಮ್ಮ ಉದ್ದಿಶ್ಯವು ನೆರವೇರುವದು” ಎಂದು ಹೇಳಿದನು. ಈ ಪ್ರಕಾರ ಸಂಪಾತಿಯು ನುಡಿದದ್ದನ್ನು ಕೇಳಿದ ಮಾತ್ರದಿಂದ ಎಲ್ಲ ವಾನರರಿಗೆ ಬಹಳ ಆನಂದವಾಯಿತು. ಆಗ ಅವರೆಲ್ಲರು ಪರಾಕ್ರಮಿಯಾದ ಹನುಮಂತನನ್ನು ಈ ಕೆಲಸಕ್ಕಾಗಿ ಕಳುಹಿಸಬೇಕೆಂದು ನಿರ್ಣಯಮಾಡಿದರು. ಅದರಂತೆ ಹನುಮಂತನು ಸಮುದ್ರ ದಾಟಿ ಅಲ್ಲಿಗೆ ಹೋಗಲಿಕ್ಕೆ ಸಿದ್ಧನಾದನು.

## ೫ ಸುಂದರಕಾಂಡ.

(ಸೀತೆಯು ಅಶೋಕವನದಲ್ಲಿ ಜೀವದಿಂದಿರುತ್ತಾಳೆಂಬ ಸುಂದರವಾದ, ಅಂದರೆ ಆನಂದಕರವಾದ, ವರ್ತಮಾನವನ್ನು ಹನುಮಂತನು ರಾಮನಿಗೆ ತಿಳುಹಿಸಿದ ಸಂಗತಿಯನ್ನು ಈ ಕಾಂಡದಲ್ಲಿ ಹೇಳಿರುವದರಿಂದ ಇದಕ್ಕೆ “ಸುಂದರಕಾಂಡ” ಎಂಬ ಹೆಸರು ಬಂದಿರುತ್ತದೆ.)

ಹನುಮಂತನು ಮಹೇಂದ್ರ ಪರ್ವತದ ಮೇಲಿಂದ ಉಡ್ಡಾಣ ಮಾಡಿ ಸುವೇಲ ಪರ್ವತದ ಮೇಲೆ ಬಂದು ಕುಳಿತು, ಸುವರ್ಣಮಯ ಲಂಕೆಯನ್ನು ನೋಡಿಕೊಂಡು, ಆ ಲಂಕೆಯೊಳಗೆ ಪ್ರವೇಶ ಮಾಡಿದನು. ಅಲ್ಲಿಂದ ಅವನು ಅರಮನೆಯೊಳಗೆ ಹೋಗಿ, ಅಲ್ಲಿಯ ಪ್ರತಿಯೊಂದು ಕೋಣೆಯನ್ನೂ ಪ್ರತಿಯೊಂದು ಭಾಗವನ್ನೂ ಸೂಕ್ಷ್ಮರೀತಿಯಿಂದ ಹುಡುಕಿದನು. ಸೀತೆಯು ಅಲ್ಲೆಲ್ಲಿಯೂ ಕಾಣಲಿಲ್ಲ. ಆಗ ಹನುಮಂತನಿಗೆ ಬಹಳ ವ್ಯಸನವಾಯಿತು. ಕಡೆಗೆ ಅವನು ರಾವಣನ ಯಾವತ್ತು ಉದ್ಯಾನಗಳನ್ನು ಹುಡುಕಲಿಕ್ಕೆ ಹೊರಟು, ಇಂದ್ರನ ನಂದನವನದಂತೆ ಸುಂದರವಾಗಿದ್ದ ಅಶೋಕ

ವನಕ್ಕೆ ಬಂದನು ಆ ವನವನ್ನೆಲ್ಲ ಹನುಮಂತನು ಹುಡುಕಲಾಗಿ ಆ ವನದಲ್ಲಿ ಒಂದು ಅಶೋಕವೃಕ್ಷದ ಕೆಳಗೆ ಒಬ್ಬ ಸುಂದರ ಸ್ತ್ರೀಯು ಕುಳಿತಿರುವದನ್ನೂ, ಅವಳ ಸುತ್ತಲು ರಾಕ್ಷಸಿಯರ ಕಾವಲು ಇರುವದನ್ನೂ ಅವನು ಕಂಡನು ಆಗ ಹನುಮಂತನು ತನ್ನ ಮನಸ್ಸಿನಲ್ಲಿ ಇವಳೇ ಸೀತೆಯು ಇರಬಹುದೆಂದು ತರ್ಕಿಸಿ, ಆ ಗಿಡವನ್ನೇರಿ ಅದರ ಮೇಲೆ ಅಡಗಿಕೊಂಡು ಕುಳಿತನು. ಈ ಪ್ರಕಾರ ಹನುಮಂತನು ಅಡಗಿಕೊಂಡು ಕುಳಿತಾಗ್ಗೆ ಸೀತಾದೇವಿಯು ಕಣ್ಣು ಮುಚ್ಚಿಕೊಂಡು ಕೈಜೋಡಿಸಿ 'ರಾಮ' 'ರಾಮ' ಎಂದು ಜಪವನ್ನು ನಡೆಸಿದ್ದಳು. ಅವಳು ಬಹಳ ಸೊರಗಿದ್ದಳು. ಈ ಎಲ್ಲ ಚಿನ್ಹಗಳ ಮೇಲಿಂದ ಇವಳೇ ಶ್ರೀ ರಾಮಚಂದ್ರನ ಪತ್ನಿಯಾದ ಸೀತಾದೇವಿಯು ಇರುತ್ತಾಳೆಂದು ಹನುಮಂತನು ನಿಶ್ಚಯದಿಂದ ತಿಳಿದುಕೊಂಡು, ತನಗೆ ತನ್ನ ದೀರ್ಘಪ್ರಯತ್ನದಿಂದ ಸೀತೆಯು ಶೋಧವು ಹತ್ತಿತೆಂದು ಬಹಳ ಆನಂದಪಟ್ಟನು ಆ ಬಳಿಕ ಹನುಮಂತನು ತನ್ನ ಕಡೆಗೆ ರಾಮಚಂದ್ರನು ಕೊಟ್ಟಿದ್ದ ಗುರುತಿನ ಉಂಗುರವನ್ನು ಸೀತೆಯ ಕೈಯಲ್ಲಿ ಚಲ್ಲಿಕೊಟ್ಟು, ಸೀತೆಯ ಮುಂದೆ ಕೈಜೋಡಿಸಿಕೊಂಡು ನಿಂತು – "ಎಲೈ ತಾಯಿಯೇ, ರಾಮಚಂದ್ರನೂ ಅವನ ತಮ್ಮ ಲಕ್ಷ್ಮಣನೂ ಕ್ಷೇಮದಿಂದಿರುತ್ತಾರೆ ನೀನು ಅವರ ಬಗ್ಗೆ ಏನೂ ಚಿಂತೆಮಾಡಬೇಡ. ಅವರು ನಿನ್ನನ್ನು ಬಿಡಿಸಿಕೊಂಡು ಹೋಗುವದಕ್ಕಾಗಿ ಬೇಗನೆ ಇತ್ತಕಡೆಗೆ ಬರುವವರಿದ್ದಾರೆ" ಎಂದು ಹೇಳಿ ಸುಮ್ಮನಾದನು. ಆಗ ಸೀತೆಯು ಹನುಮಂತನಿಗೆ ರಾಮಲಕ್ಷ್ಮಣರ ಸಂಬಂಧವಾಗಿ ಅನೇಕ ಪ್ರಶ್ನೆಗಳನ್ನು ಆತುರದಿಂದ ವಿಚಾರಿಸಿದಳು. ಆ ಎಲ್ಲ ಪ್ರಶ್ನೆಗಳಿಗೆ ಹನುಮಂತನು ಸಮಾಧಾನಕರ ಉತ್ತರಗಳನ್ನು ಕೊಟ್ಟತರುವಾಯ



ಹನುಮಂತನು ತನ್ನ ಕಡೆಗೆ ರಾಮಚಂದ್ರನು ಕೊಟ್ಟಿದ್ದ ಗುರುತಿನ ಉಂಗುರವನ್ನು (ರಾಮಮುದ್ರಿಕೆಯನ್ನು) ಸೀತೆಯ ಕೈಯಲ್ಲಿ ಕೊಟ್ಟನು.

(ಪುಟ ೩೬)

C. P. D.

ಸೀತೆಯು—“ನನ್ನನ್ನು ೧ ತಿಂಗಳುಗಳಲ್ಲಿ ಬಿಡಿಸಿಕೊಂಡು ಒಯ್ಯಿರಿ. ಇಲ್ಲದಿದ್ದರೆ ಈ ದಾಸಿಯು ನಿಮ್ಮ ಸೇವೆಗೆ ಎರವಾಗುವಳು” ಎಂದು ಹೇಳಿ, ತನ್ನ ಗುರುತಿನ ಬಗ್ಗೆ ತನ್ನ ತುರುಬಿನೊಳಗಿನ ದಿವ್ಯಮಣಿಯನ್ನು ತೆಗೆದು ಹನುಮಂತನ ಕೈಯಲ್ಲಿ ಕೊಟ್ಟು ಅವನಿಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೊಟ್ಟಳು. ಬಳಿಕ ಹನುಮಂತನು ತಾನು ಅಶೋಕವನಕ್ಕೆ ಬಂದ ಗುರುತಿಗಾಗಿ ರಾಕ್ಷಸರಿಗೆ ಏನಾದರೂ ಕೇಡನ್ನು ಮಾಡಬೇಕೆಂದು ಯೋಚಿಸಿ, ಆ ವನದಲ್ಲಿಯ ಅನೇಕ ಅಮೌಲ್ಯ ಗಿಡಗಳನ್ನು ಮುರಿದು ನಾಶಪಡಿಸಿದನು.

ಈ ವರ್ತಮಾನವು ರಾವಣನಿಗೆ ತಿಳಿದ ಕೂಡಲೆ ಅವನು ಹನುಮಂತನಿಗೆ ಶಿಕ್ಷೆಮಾಡಲಿಕ್ಕೆ ಕೆಲವು ರಾಕ್ಷಸರನ್ನು ಕಳುಹಿಸಿ ಕೊಟ್ಟನು. ಆಗ ಹನುಮಂತನು ಆ ರಾಕ್ಷಸರ ಮೈಮೇಲೆ ಗಿಡಗಳನ್ನೂ ಕಲ್ಲುಗಳನ್ನೂ ಒಗೆದು, ಅವರನ್ನು ಕೂಡಲೆ ಕೊಂದು ಬಿಟ್ಟನು. ತರುವಾಯ ರಾವಣನು ಅಕ್ಷ ಮತ್ತು ಇಂದ್ರಜಿತರೆಂಬ ಮಹಾ ಪರಾಕ್ರಮಿಯಾದ ತನ್ನ ಇಬ್ಬರು ಮಕ್ಕಳನ್ನು ಕಳುಹಿಸಿ ಕೊಟ್ಟನು. ಹನುಮಂತನು ಆ ಕ್ಷಣವೇ ಅಕ್ಷನನ್ನು ಕೊಂದು ಬಿಟ್ಟು, ರಾವಣನನ್ನು ಕಂಡುಹೋಗುವ ಉದ್ದಿಶ್ಯ ತಾನಾಗಿ ಇಂದ್ರಜಿತನ ಸ್ವಾಧೀನನಾದನು. ಬಳಿಕ ಇಂದ್ರಜಿತನು ಹನುಮಂತನನ್ನು ಹಗ್ಗದಿಂದ ಕಟ್ಟಿ, ಅವನನ್ನು ರಾವಣನ ಸಭೆಯಲ್ಲಿ ಒಯ್ದು ನಿಲ್ಲಿಸಿದನು. ಆಗ ಹನುಮಂತನು ತನ್ನ ಬಾಲದಿಂದ ಉಚ್ಚಾಸನವನ್ನು ಮಾಡಿಕೊಂಡು, ರಾವಣನ ಮುಂದೆ ಕುಳಿತನು. ರಾವಣನು ತನಗೆ ಕ್ಷುದ್ರ ವಾನರನು ಈ ಪ್ರಕಾರ ಅಪಮಾನವನ್ನು ಮಾಡಿದನೆಂದು ನೋಡಿ, ಅದನ್ನು ಸಹಿಸಲಾರದೆ, ಆ ವಾನರನನ್ನು ಕೊಂದು ಬಿಡಲಿಕ್ಕೆ ತನ್ನ ಮಂತ್ರಿಗಳಿಗೆ ಅಪ್ಪಣೆಮಾಡಿದನು. ಆಗ ರಾವಣನ

ತಮ್ಮನಾದ ವಿಭೀಷಣನು ರಾವಣನಿಗೆ—"ದೂತನನ್ನು ಕೊಲ್ಲು ವದು ರಾಜಧರ್ಮವಲ್ಲ ಆದುದರಿಂದ ಅವನಿಗೆ ನೀನು ಇತರ ಬೇಕಾದ ಶಿಕ್ಷೆಯನ್ನು ಮಾಡು" ಎಂದು ಹೇಳಿದನು. ಅದಕ್ಕೆ ರಾವಣನು ಒಡಂಬಟ್ಟು ತನ್ನ ಸೇವಕರಿಗೆ—"ಈ ವಾನರನು ನನಗೆ ತನ್ನ ಬಾಲದಿಂದ ಅಪಮಾನಮಾಡಿದ ಕಾರಣ ಅವನ ಬಾಲ ವನ್ನು ಸುಟ್ಟುಬಿಡಿರಿ ಎಂದು ಅಪ್ಪಣೆಮಾಡಿದನು ಕೂಡಲೆ ರಾವ ಣನ ಸೇವಕರು ಹನುಮಂತನ ಬಾಲವನ್ನು ಎಣ್ಣೆಯಲ್ಲಿ ತೊಯ್ಯಿ ಸಿದ ಅರಿವೆಯ ಚೂರುಗಳಿಂದ ಸುತ್ತಿ ಆ ಬಾಲಕ್ಕೆ ಬೆಂಕೀ ಹಚ್ಚಿ ದರು ಆಗ ಹನುಮಂತನು ಅಲ್ಲಿಂದ ಹೊರಟು, ಒಂದು ಮನೆಯ ಮೇಲಿಂದ ಎರಡನೇ ಮನೆಯ ಮೇಲೆ, ಎರಡನೇ ಮನೆಯ ಮೇಲಿಂದ ಮೂರನೇ ಮನೆಯ ಮೇಲೆ, ಈ ಪ್ರಕಾರ ಜಿಗಿ ದಾಡುತ್ತ ಇಡೀ ಲಂಕಾಪಟ್ಟಣವನ್ನು ಸುಟ್ಟು ಸಮುದ್ರತೀರದ ಕಡೆಗೆ ಹೋದನು. ಈ ರೀತಿಯಿಂದ ಹನುಮಂತನು ಲಂಕೆಯನ್ನು ಸುಟ್ಟದ್ದನ್ನು ನೋಡಿ, ರಾವಣನಿಗೆ ತಾನು ಅವನ ಬಾಲವನ್ನು ಸುಡ ಲಿಕ್ಕೆ ಅಪ್ಪಣೆಮಾಡಿದ್ದಕ್ಕಾಗಿ ಬಹಳ ಪಶ್ಚಾತ್ತಾಪವಾಯಿತು.

ಹನುಮಂತನು ಸಮುದ್ರತೀರಕ್ಕೆ ಬಂದು ಮುಟ್ಟಿದ ಬಳಿಕ, ತನ್ನ ಬಾಲವನ್ನು ಸಮುದ್ರದಲ್ಲಿ ಮುಳುಗಿಸಿ ಅದನ್ನು ನಂದಿಸಿ ಕೊಂಡನು. ಆ ಮೇಲೆ ಅವನು ಅಲ್ಲಿಂದ ಒಮ್ಮೆಲೆ ಉಡ್ಡಾಣ ಮಾಡಿ ಮಹೇಂದ್ರ ಪರ್ವತಕ್ಕೆ ಬಂದು ಇಳಿದನು ಆ ಸ್ಥಳದಲ್ಲಿ ಯಾವತ್ತು ವಾನರರು ಅವನ ದಾರಿಯನ್ನು ನೋಡುತ್ತ ಕುಳಿತಿ ದ್ದರು. ಅವರೆಲ್ಲರಿಗೂ ಹನುಮಂತನು ಲಂಕೆಯಲ್ಲಿ ನಡೆದ ಯಾವತ್ತು ವೃತ್ತಾಂತವನ್ನು ತಿಳುಹಿಸಿದನು. ಅದನ್ನು ಕೇಳಿ ಅವ ರೆಲ್ಲರು ಸಂತೋಷಪಟ್ಟು ರಾಮನನ್ನು ಕಾಣುವದಕ್ಕಾಗಿ ಕಿಷ್ಕಿಂಧಾ

ನಗರಕ್ಕೆ ಹೊರಟರು ಹನುಮಂತನು ತನಗೆ ದೂರಿನ ಪ್ರವಾಸ ದಿಂದ ಉಂಟಾದ ಶ್ರಮವನ್ನು ಪರಿಹಾರಮಾಡಿಕೊಳ್ಳುವದಕ್ಕಾಗಿ ಸುಗ್ರೀವನ ಮಧುವನದೊಳಗಿನ ಹಣ್ಣುಗಳನ್ನು ಯಥೇಚ್ಛವಾಗಿ ತಿಂದನು. ಬಳಿಕ ಹನುಮಂತನು ರಾಮಚಂದ್ರ ಮತ್ತು ಸುಗ್ರೀವರ ಬಳಿಗೆ ಹೋಗಿ ಸೀತೆಯ ಶೋಧವು ಹತ್ತಿದ ಆನಂದಕರ ವರ್ತ ಮಾನವನ್ನು ಅವರಿಗೆ ತಿಳುಹಿಸಿ, ಸೀತೆಯು ಕೊಟ್ಟಿದ್ದ ದಿವ್ಯಮಣಿ ಯನ್ನು ರಾಮಚಂದ್ರನಿಗೆ ಕೊಟ್ಟನು.

ಸೀತೆಯು ಕ್ಷೇಮದಿಂದ ಇರುವದನ್ನು ಕೇಳಿಯೂ, ಅವಳು ಕಳುಹಿಸಿದ ದಿವ್ಯಮಣಿಯನ್ನು ನೋಡಿಯೂ, ರಾಮನು ತಾನು ಪ್ರತ್ಯಕ್ಷ ಸೀತೆಯನ್ನು ನೋಡಿದವನಂತೆ ಆನಂದವನ್ನು ಹೊಂದಿ— "ಎಲೈ ವಾಯುಪುತ್ರನೇ, ನೀನು ಈ ಮಹತ್ವದ ಕೆಲಸವನ್ನು ಮಾಡಿಕೊಂಡು ಬಂದುದಕ್ಕಾಗಿ ನಿನಗೆ ಪ್ರೇಮಾಲಿಂಗನವೆಂಬ ಕಾಣಿ ಕೆಯನ್ನು ಕೊಡುತ್ತೇನೆ" ಎಂದು ಹೇಳಿ ಹನುಮಂತನನ್ನು ಅಪ್ಪಿ ಕೊಂಡು ಅವನಿಗೆ ಆಲಿಂಗನವನ್ನು ಕೊಟ್ಟನು. ಆಗ ಹನು ಮಂತನಿಗೆ ಆದ ಆನಂದವನ್ನು ಎಷ್ಟೆಂತ ಬಣ್ಣಿಸಬೇಕು?

---

## ೬. ಯುದ್ಧಕಾಂಡ.

(ರಾಮರಾವಣರೊಳಗ ಯುದ್ಧವು ನಡೆದು ರಾವಣನು ಸತ್ತು ಹೋದ ಸಂಗತಿಯೂ, ರಾವಣನ ತರುವಾಯ ವಿಭೀಷಣನನ್ನು ಲಂಕಾ ರಾಜ್ಯದ ಸಿಂಹಾಸನದ ಮೇಲೆ ಕುಳ್ಳಿರಿಸಿ ರಾಮನು ಅಯೋಧ್ಯೆಗೆ ತಿರುಗಿ ಹೋದ ಸಂಗತಿಯೂ ವಿವರಿಸಲ್ಪಟ್ಟಿರುತ್ತವೆ ಆದುದರಿಂದ ಇದಕ್ಕೆ "ಯುದ್ಧಕಾಂಡ" ಎಂಬ ಹೆಸರು ಬಂದಿರುವದು)

ಸೀತೆಯು ಜೀವಂತವಿದ್ದು ಆಕೆಯನ್ನು ರಾವಣನು ಲಂಕೆ ಯೊಳಗೆ ತನ್ನ ಅಶೋಕವನದಲ್ಲಿ ರಾಕ್ಷಸಿಯರ ಕಾವಲದೊಳಗೆ

ಇಟ್ಟಿರುತ್ತಾನೆಂತಲೂ, ಆಕೆಯು ಅಲ್ಲಿ ಬಹುಪರಿಯ ದುಃಖಕಷ್ಟಾದಿಗಳನ್ನು ಭೋಗಿಸುತ್ತಾಳೆಂತಲೂ ಹನುಮಂತನ ಬಾಯಿಂದ ರಾಮಚಂದ್ರನಿಗೆ ತಿಳಿದ ಕ್ಷಣವೇ ಅವನು ಲಂಕೆಯ ಮೇಲೆ ಮುತ್ತಿಗೆ ಹಾಕಬೇಕೆಂದು ನಿಶ್ಚಯಿಸಿ, ತನ್ನ ಸಂಗಡ ವಾನರರ ಮತ್ತು ಅಶ್ವಲರ ಸೈನ್ಯವನ್ನು ತೆಗೆದುಕೊಂಡು, ದಕ್ಷಿಣ ಸಮುದ್ರದ ತನಕ ಬಂದು ಮುಟ್ಟಿದನು. ಮುಂದೆ ಈ ವೀರರ ಮಾರ್ಗವು ಸಮುದ್ರದ ಮೂಲಕ ಪ್ರತಿಬಂಧವಾಯಿತು. ಆಗ ರಾಮಚಂದ್ರನು ಈ ಸಮುದ್ರವನ್ನು ಹೇಗೆ ದಾಟಿ ಹೋಗತಕ್ಕದ್ದೆಂಬದನ್ನು ಕುರಿತು ವಾನರವೀರರ ಮತ್ತು ಅಶ್ವಲವೀರರ ಸಂಗಡ ಆಲೋಚನೆಯನ್ನು ನಡೆಸಿದನು.

ರಾಮಚಂದ್ರನು ವಾನರರ ಮತ್ತು ಋಕ್ಷ (ಅಶ್ವಲ) ಈ ಉಭಯತರ ಪ್ರಚಂಡ ಸೈನ್ಯವನ್ನು ಕರೆದುಕೊಂಡು ಲಂಕೆಯ ಮೇಲೆ ಮುತ್ತಿಗೆಯನ್ನು ಹಾಕುವದಕ್ಕಾಗಿ ಸಮುದ್ರದ ತನಕ ಬಂದು ಮುಟ್ಟಿರುತ್ತಾನೆಂದು ರಾವಣನು ತನ್ನ ಪರಿಚಾರಕರಿಂದ ಕೇಳಿದ ಕೂಡಲೆ ಅವನು ತನ್ನ ಮಂತ್ರಿಗಳ ಆಲೋಚನೆಯನ್ನು ಕೇಳಿಕೊಳ್ಳುವದಕ್ಕಾಗಿ ಸಭೆಯನ್ನು ನೆರೆಯಿಸಿದನು. ಆ ಸಭೆಯಲ್ಲಿ ತಾವು ರಾಮಚಂದ್ರನ ಸಂಗಡ ಯುದ್ಧಮಾಡಬೇಕೋ ಮಾಡಬಾರದೋ ಎಂಬದರ ವಿಚಾರವು ನಡೆಯಿತು. ಅನೇಕ ಮಂದಿ ಮಂತ್ರಿಗಳು ರಾಮನ ಸಂಗಡ ಯುದ್ಧಮಾಡಬೇಕೆಂದು ತಮ್ಮ ಅಭಿಪ್ರಾಯವನ್ನು ಕೊಟ್ಟರು. ಆದರೆ ರಾವಣನ ಕನಿಷ್ಠ ಬಂಧುವಾದ ವಿಭೀಷಣನು ಸ್ಪಷ್ಟವಾಗಿ ಹೇಳಿದ್ದೇನೆಂದರೆ—"ಎಲೈ ಅಣ್ಣನಾದ ರಾವಣನೇ, ನಾನು ನಿನಗೆ ಕೆಲವು ಹಿತೋಕ್ತಿಗಳನ್ನು ಹೇಳುತ್ತೇನೆ, ಲಕ್ಷ್ಯಕೊಟ್ಟು ಕೇಳು. ರಾಮನು ನಿನಗೆ

ಯಾವದೂ ಅಪರಾಧವನ್ನು ಮಾಡದೆ ನೀನು ಅವನ ಹೆಂಡತಿ ಯನ್ನು ಕದ್ದು ತಂದಿರುವೆ. ಇದು ನಿನ್ನ ಘೋರವಾದ ಅಪರಾಧವೇ ಸರಿ. ಆದುದರಿಂದ ನೀನು ಅವನ ಹೆಂಡತಿಯನ್ನು ಅವನಿಗೆ ಒಪ್ಪಿಸಿ ಅವನ ಕ್ಷಮೆಯನ್ನು ಬೇಡಿಕೋ. ಅಂದರೆ ಅದರಿಂದ ನಿನ್ನ ಕಲ್ಯಾಣವಾಗುವದು. ನೀನು ವ್ಯರ್ಥವಾಗಿ ಹಟಕ್ಕೆ ಬಿದ್ದು ಅವನ ಸಂಗಡ ಯುದ್ಧವನ್ನು ಮಾಡಿದರೆ, ಅವನು ನಿನ್ನ ಪರಾಜಯವನ್ನು ಮಾಡಿ, ನಿನ್ನನ್ನೂ ನಿನ್ನ ಧನಕನಕಸಂಪನ್ನ ರಾಜಧಾನಿಯನ್ನೂ ನಾಶಮಾಡುವನು." ವಿಭೀಷಣನ ಈ ಭಾಷಣವು ರಾವಣನಿಗೆ ರುಚಿಸಲಿಲ್ಲ ಆದುದರಿಂದ ಅವನು ಕೂಡಲೆ ವಿಭೀಷಣನನ್ನು ಧಿಕ್ಕರಿಸಿ — "ವಿಭೀಷಣನೇ, ನೀನು ನೀಚನಿರುತ್ತೀ! ನೀನು ನಮ್ಮ ಕುಲಕ್ಕೆ ಕಲಂಕವನ್ನು ಹಚ್ಚುವೆ! ನೀನು ಇಲ್ಲಿ ಒಂದು ಕ್ಷಣ ಹೊತ್ತಾದರೂ ನಿಂತುಕೊಂಡರೆ ನಾನು ನಿನಗೆ ದೇಹಾಂತ ಶಿಕ್ಷೆ ಯನ್ನು ವಿಧಿಸುವೆನು" ಎಂದು ನುಡಿದನು. ಇದನ್ನು ಕೇಳಿ ವಿಭೀ ಷಣನಿಗೆ ಸಹನವಾಗಲಿಲ್ಲ. ಅವನು ಕೂಡಲೆ ತನ್ನ ನಾಲ್ಕು ಮಂದಿ ಮಿತ್ರರನ್ನು ಕೂಡಿಕೊಂಡು ಆ ಸ್ಥಳವನ್ನು ಬಿಟ್ಟುಕೊಟ್ಟು ಆಕಾಶಮಾರ್ಗದಿಂದ ಸಮುದ್ರವನ್ನು ದಾಟಿ, ರಾಮಚಂದ್ರನು ತನ್ನ ಸೈನ್ಯಸಹವರ್ತಮಾನ ಇಳಿದು ಕೊಂಡಿದ್ದ ಸ್ಥಳಕ್ಕೆ ಹೋಗಿ, ಅವನಿಗೆ ನಮಸ್ಕರಿಸಿ, ಅವನ ಮುಂದೆ ರಾವಣನ ಸಭೆಯಲ್ಲಿ ನಡೆದ ಯಾವತ್ತು ವೃತ್ತಾಂತವನ್ನು ತಿಳುಹಿಸಿದನು. ಹಾಗೂ ತನ್ನನ್ನು ರಾವಣನು ಅಟ್ಟಿಕೊಟ್ಟಿದ್ದಕ್ಕಾಗಿ ತಾನು ಅವನ ಬಳಿಗೆ ಬಂದಿರು ತ್ತೇನೆಂತಲೂ, ತನ್ನನ್ನು ಅನಾದರಮಾಡದೆ ಕೇಳಿಕೊಂಡರೆ ತಾನು ಅವನಿಗೆ ರಾವಣನ ಎಲ್ಲ ಗುಪ್ತಕಾರಸ್ಥಾನಗಳನ್ನು ತಿಳುಹಿಸಿ ಯುದ್ಧ ದಲ್ಲಿ ಜಯವನ್ನು ಸಂಪಾದಿಸುವಂತೆ ಸಹಾಯಮಾಡುತ್ತೇನೆಂತಲೂ

ಹೇಳಿದನು. ಇದಕ್ಕೆ ರಾಮಚಂದ್ರನು ಒಡಂಬಟ್ಟು, ವಿಭೀಷಣ ನನ್ನು ವಿಶ್ವಾಸಪೂರ್ವಕವಾಗಿ ತನ್ನ ಪಕ್ಷಕ್ಕೆ ಕೂಡಿಸಿಕೊಂಡು, ತಾನು ರಾವಣನನ್ನು ಯುದ್ಧದಲ್ಲಿ ಗೆದ್ದನಂತರ ವಿಭೀಷಣನನ್ನು ಲಂಕೆಯ ರಾಜ್ಯಸಿಂಹಾಸನದ ಮೇಲೆ ಕುಳ್ಳಿರಿಸುತ್ತೇನೆಂದು ಹೇಳಿದನು. ಈ ಪ್ರಕಾರ ರಾಮಚಂದ್ರ ಮತ್ತು ವಿಭೀಷಣ ಈ ಉಭಯತರೊಳಗೆ ಭಾಷಣವಾದ ಬಳಿಕ ಅವರವರ ಸ್ನೇಹವು ಕೂಡಿತು ಆ ಮೇಲೆ ಆ ಉಭಯತರು ಮುಂದೆ ನಡೆಯುವ ಯುದ್ಧವನ್ನು ಕುರಿತು ಸುಗ್ರೀವಾದಿಕರ ಕೂಡ ವಿಚಾರಮಾಡಿದರು

ಇತ್ತಲಾ ರಾವಣನು ರಾಮನ ಸೈನ್ಯದ ಸಾಮರ್ಥ್ಯವು ಎಷ್ಟಿರುತ್ತದೆಂಬುವದನ್ನು ತಿಳಿದುಕೊಳ್ಳುವದಕ್ಕಾಗಿ ಒಬ್ಬ ಗುಪ್ತಪರಿಚಾರಕನನ್ನು ಕಳುಹಿಸಿ, ಅವನ ಬಾಯಿಂದ ರಾಮನ ಸೈನ್ಯವು ಅಸಂಖ್ಯವಿರುತ್ತದೆಂದು ಕೇಳಿಕೊಂಡು ತನ್ನ ಮನಸ್ಸಿನಲ್ಲಿ ಬಹಳ ಹೆದರಿದನು. ಆದುದರಿಂದ ಅವನು ರಾಮನ ಸೈನ್ಯದ ಸಾಮರ್ಥ್ಯವನ್ನು ಕಡಿಮೆ ಮಾಡುವದಕ್ಕಾಗಿ ಸುಗ್ರೀವನಿಗೆ ದ್ರವ್ಯವನ್ನು ಕೊಟ್ಟಾಗಲಿ, ಸವಿಮಾತುಗಳಿಂದಾಗಲಿ, ಸುಗ್ರೀವನನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದು ಯೋಚಿಸಿ ಈ ಕೆಲಸದ ಬಗ್ಗೆ ಶುಕನೆಂಬ ತನ್ನೊಬ್ಬ ದೂತನನ್ನು ಅವನ ಕಡೆಗೆ ಕಳುಹಿಸಿದನು

ಶುಕನು ಸಮುದ್ರವನ್ನು ದಾಟಿ ಉತ್ತರದ ಕಡೆಗೆ ಬಂದು, ಸುಗ್ರೀವನನ್ನು ಏಕಾಂತದಲ್ಲಿ ಕಂಡು – "ರಾಮನ ಪಕ್ಷವನ್ನು ಬಿಟ್ಟು ರಾವಣನ ಪಕ್ಷಕ್ಕೆ ಕೂಡಿಕೋ" ಎಂದು ಅವನಿಗೆ ಬಹಳ ಆಗ್ರಹ ಮಾಡಿದನು. ಆದರೆ ಅವನ ಪ್ರಯತ್ನವೆಲ್ಲವು ವ್ಯರ್ಥವಾಯಿತು. ಸುಗ್ರೀವನ ಮನಸ್ಸು ಶುಕನ ಪ್ರಯತ್ನದಿಂದ ಏನೂ ತಿರುಗಲಿಲ್ಲ ವಿಷ್ಟೇ ಅಲ್ಲ; ತಿರುಗಿ ಸುಗ್ರೀವನು ಶುಕನ ಕೃತ್ಯಕ್ಕಾಗಿ ಅವನಿಗೆ

ದೇಹಾಂತ ಶಿಕ್ಷೆಯನ್ನು ಕೊಡಬೇಕೆಂದು ಯತ್ನಿಸಿದನು. ಆದರೆ ರಾಮನು ಅವನಿಗೆ ಹಾಗೆ ಮಾಡಗೊಡಲಿಲ್ಲ. ಈ ರೀತಿಯಿಂದ ಶುಕನು ತನ್ನ ಜೀವ ಉಳಿಸಿಕೊಂಡು, ರಾವಣನ ಕಡೆಗೆ ತಿರುಗಿ ಹೋಗಿ, ಇಲ್ಲಿ ನಡೆದ ಎಲ್ಲ ಸಂಗತಿಗಳನ್ನು ತಿಳುಹಿಸಿದನು. ಶುಕನ ಪ್ರಯತ್ನವು ನಿಷ್ಫಲವಾದುದಕ್ಕಾಗಿ ರಾವಣನಿಗೆ ಸ್ವಲ್ಪ ನಿರಾಶೆಯಾಯಿತು. ಆದರೂ ಅವನು ಯುದ್ಧದ ಹಂಬಲವನ್ನು ಬಿಡಲಿಲ್ಲ.

ಇತ್ತಲಾ ರಾಮನೂ ರಾಮನ ಕಡೆಯ ವೀರರೂ ಸಮುದ್ರವನ್ನು ಹೇಗೆ ದಾಟ ಹೋಗಬೇಕೆಂಬ ಬಗ್ಗೆ ಬಹಳ ಹೊತ್ತು ವಿಚಾರ ಮಾಡಿದರು. ಕೊನೆಗೆ ಅವರೆಲ್ಲರೂ ರಾಮನೇ ಸಮುದ್ರರಾಜನಿಗೆ ದಾರಿಯನ್ನು ಬಿಡಲಿಕ್ಕೆ ಪ್ರಾರ್ಥನೆಯನ್ನು ಮಾಡಬೇಕೆಂದು ನಿರ್ಣಯಿಸಿದರು. ಆ ಪ್ರಕಾರ ರಾಮನು ದರ್ಭಾಸನದ ಮೇಲೆ ಕುಳಿತು, ಮೂರು ದಿವಸ ಸಮುದ್ರರಾಜನ ಪ್ರಾರ್ಥನೆಯನ್ನು ಮಾಡಿದನು ಆದರೂ ಸಮುದ್ರರಾಜನು ಅವನಿಗೆ ದರ್ಶನವನ್ನು ಕೊಡಲಿಲ್ಲ. ಆಗ ರಾಮನು ಸಿಟ್ಟಿಗೆದ್ದು, ಸಮುದ್ರರಾಜನನ್ನು ಶೋಷಣಮಾಡುವುದಕ್ಕಾಗಿ ತನ್ನ ಧನುಷ್ಯಕ್ಕೆ ಬಾಣವನ್ನು ಹೂಡಿ ಸಮುದ್ರರಾಜನಿಗೆ ಗುರಿಯನ್ನು ಹೊಡೆಯಲಾರಂಭಿಸಿದನು. ಇಷ್ಟರಲ್ಲಿ ಸಮುದ್ರರಾಜನು ಮನುಷ್ಯರೂಪವನ್ನು ಧಾರಣಮಾಡಿ ರಾಮನ ಮುಂದೆ ಕೈಜೋಡಿಸಿಕೊಂಡು ಬಂದು ನಿಂತು—“ಶ್ರೀ ರಾಮಚಂದ್ರನೇ, ನಿನ್ನ ಸೈನ್ಯದಲ್ಲಿ ನಲನೆಂಬ ವಾನರವೀರನು ಇರುತ್ತಾನೆ. ಅವನಿಗೆ ನೀನು ಸೇತುವೆಯನ್ನು ಕಟ್ಟಲಿಕ್ಕೆ ನೇಮಿಸು. ಆ ಸೇತುವೆಯಿಂದ ನನ್ನನ್ನು ದಾಟ ಲಂಕೆಗೆ ಹೋಗಲಿಕ್ಕೆ ನಿನಗೂ ನಿನ್ನ ಸೈನ್ಯಕ್ಕೂ ಸುಲಭವಾಗುವುದು” ಎಂದು ಹೇಳಿ ಗುಪ್ತನಾದನು.

ಸಮುದ್ರರಾಜನು ಸೂಚಿಸಿದ ಈ ಯುಕ್ತಿಯನ್ನು ಕೇಳಿ ರಾಮನು ಕೂಡಲೆ ನಳನನ್ನು ಈ ಕೆಲಸಕ್ಕೆ ನೇಮಿಸಿದನು. ಅವನ ಸಹಾಯಕ್ಕೆ ಅನೇಕ ಮಂದಿ ವಾನರರೂ ಋಕ್ಷರೂ ಸಿದ್ಧರಾದರು. ಇವರೆಲ್ಲರು ದೊಡ್ಡ ದೊಡ್ಡ ಮರಗಳನ್ನೂ ಕಲ್ಲುಗಳನ್ನೂ ತಂದು ನೀರೊಳಗೆ ಒಗೆದರು. ಈ ಪ್ರಕಾರ ಹಾಹಾ ಅನ್ನುವಷ್ಟರಲ್ಲಿ ಸೇತುವೆಯು ಕಟ್ಟಿ ಸಿದ್ಧವಾಯಿತು.

ಈ ಸೇತುವೆಯ ಮೇಲಿಂದ ರಾಮಲಕ್ಷ್ಮಣರು ತಮ್ಮ ವಿಸ್ತೃತವಾದ ಸೈನ್ಯದೊಂದಿಗೆ ಆ ಸಮುದ್ರವನ್ನು ದಾಟಿ, ಸುವೇಲ ಪರ್ವತದ ಮೇಲೆ ಬಂದು ಇಳಿದುಕೊಂಡರು. ಈ ವರ್ತಮಾನವು ರಾವಣನಿಗೆ ತಿಳಿದ ಕೂಡಲೆ ಅವನು ತನ್ನ ರಾಜಮಂದಿರದ ಉಪ್ಪರಿಗೆಯ ಮೇಲಿಂದ ರಾಮನ ಸೈನ್ಯದ ವಿಸ್ತಾರವನ್ನು ನೋಡುತ್ತ ಕುಳಿತನು. ಸುಗ್ರೀವಾದಿ ವೀರರು ಸಹ ಸುವೇಲ ಪರ್ವತದ ಮೇಲೆ ಕುಳಿತು ಲಂಕೆಯ ರಚನೆಯನ್ನು ನೋಡಲಿಕ್ಕೆ ಹತ್ತಿದರು. ಆಗ ರಾವಣನು ಸುಗ್ರೀವಾದಿ ವೀರರ ಕಣ್ಣಿಗೆ ಬಿದ್ದನು. ಆ ಕೂಡಲೆ ಸುಗ್ರೀವನು ಸುವೇಲ ಪರ್ವತದ ಮೇಲಿಂದ ಜಿಗಿದು, ರಾವಣನ ಹತ್ತರ ಹೋಗಿ, ಅವನೊಡನೆ ದ್ವಂದ್ವಯುದ್ಧವನ್ನು ಮಾಡಿ, ಅವನ ತೇಜಸ್ಸನ್ನು ಹರಣಮಾಡಿಕೊಂಡು ತನ್ನ ಸೈನ್ಯಕ್ಕೆ ತಿರುಗಿ ಬಂದನು.

ರಾಮರಾವಣರು ಪರಸ್ಪರ ಸೈನ್ಯಗಳನ್ನು ಸ್ವತಃ ನೋಡಿಕೊಂಡು ಬಂದನಂತರ ಅವರು ಯುದ್ಧದ ಸಲುವಾಗಿ ತಮ್ಮ ತಮ್ಮ ಸೈನ್ಯಗಳನ್ನು ಸಿದ್ಧಪಡಿಸಿದರು. ರಾವಣನ ತಾಯಿಯಾದ ಕೇಕಸಿಯು ರಾವಣನಿಗೆ ಯುದ್ಧಮಾಡಬೇಡವೆಂದು ಪರಿಪರಿಯಿಂದ ಹೇಳಿದಳು. ಆದರೆ ರಾವಣನು ಅವಳ ಉಪದೇಶವನ್ನು ಲಾಲಿಸಲಿಲ್ಲ. ಅವನು ತಾನು ಯುದ್ಧವನ್ನು ಮಾಡೇತೀರುವೆನೆಂದು ಹಟವನ್ನು ಹಿಡಿದನು.

ರಾಮನಂತೂ ಯುದ್ಧಮಾಡಲಿಕ್ಕೆ ಸಿದ್ಧನಾಗಿದ್ದನು. ಆದರೆ ಯುದ್ಧಮಾಡುವ ಮುಂಚೆ ಸಾಮೋಪಚಾರದಿಂದ ರಾವಣನ ಮನಸ್ಸು ಒಲಿಯುತ್ತದೋ ಏನೋ ಎಂದು ನೋಡುವುದಕ್ಕಾಗಿ ರಾಮನು ರಾವಣನ ಕಡೆಗೆ ವಾಲಿಯ ಪುತ್ರನಾದ ಅಂಗದನನ್ನು ಕಳುಹಿಸಿದನು. ಅಂಗದನು ಬೇಕಾದಷ್ಟು ರೀತಿಯಿಂದ ಹೇಳಿದಾಗ್ಯೂ ರಾವಣನ ಮನಸ್ಸು ತಿರುಗಲಿಲ್ಲ. ಆಗ ಅಂಗದನು ನಿರುಪಾಯದಿಂದ ತಿರುಗಿ ಬಂದನು ಆಮೇಲೆ ರಾಮನು ರಾವಣನ ಕೂಡ ಯುದ್ಧವನ್ನು ಆರಂಭಿಸಿದನು ರಾಮನ ಸೈನಿಕರಾದ ವಾನರರೂ ಋಕ್ಷರೂ ಕಲ್ಲುಗಳನ್ನೂ ಗಿಡದ ಟೊಂಗೆಗಳನ್ನೂ ರಾಕ್ಷಸರ ಮೈಮೇಲೆ ಒಗೆದರು. ಆಗ ರಾಕ್ಷಸರು ತಮ್ಮ ಭಾಲೆಬರ್ಚಿಗಳನ್ನೂ ಕತ್ತಿಕಠಾರಿಗಳನ್ನೂ ತೆಗೆದುಕೊಂಡು ವಾನರರ ಮತ್ತು ಋಕ್ಷರ ಮೈಮೇಲೆ ಸಾಗಿಹೋಗಿ ಯುದ್ಧಮಾಡಿದರು ಪರಸ್ಪರ ಸೈನ್ಯದವರಿಗೆ ಆದ ಗಾಯಗಳಿಂದ ಭೂಮಿಯ ಮೇಲೆ ರಕ್ತದ ದೊಡ್ಡ ಹೊಳೆಯು ಹರಿಯಿತು

ಹನುಮಂತನು ಜಂಬುಮಾಲಿ ಮೊದಲಾದ ರಾಕ್ಷಸರನ್ನೂ, ಲಕ್ಷ್ಮಣನು ವಿರೂಪನೇತ್ರ ಮೊದಲಾದ ರಾಕ್ಷಸರನ್ನೂ, ರಾಮನು ಅಗ್ನಿಕೇತು, ರಶ್ಮಿಕೇತು, ಯಜ್ಞಕೋಪ ಮೊದಲಾದ ರಾಕ್ಷಸರನ್ನೂ ಸಂಹರಿಸಿದರು. ಈ ರೀತಿಯಿಂದ ನೂರಾರು ಮಂದಿ ರಾಕ್ಷಸರು ಯಮಸದನಕ್ಕೆ ಹೋದರು. ಈ ಪ್ರಕಾರ ಈ ಘನಘೋರ ಯುದ್ಧವು ಕೆಲವುಹೊತ್ತು ನಡೆದ ನಂತರ ರಾವಣಪುತ್ರನಾದ ಇಂದ್ರಜಿತುವು ಯುದ್ಧಮಾಡುವದಕ್ಕೆ ಬಂದನು. ಅವನು ಅಸಂಖ್ಯ ಮಂದಿ ವಾನರರನ್ನೂ ಋಕ್ಷರನ್ನೂ ಸಂಹರಿಸಿ, ರಾಮಲಕ್ಷ್ಮಣರ ಮೇಲೆ ಭುಜಂಗಾಸ್ತ್ರವನ್ನು ಪ್ರಯೋಗಮಾಡಿದನು ಅದರಿಂದ ಅವರು ಮೂರ್ಛಿತರಾಗಿ ಭೂಮಿಯ ಮೇಲೆ ಬಿದ್ದರು. ಈ

ಪ್ರಸಂಗವನ್ನು ಸಾಧಿಸಿ ರಾವಣನು ಅಶೋಕವನದಲ್ಲಿದ್ದ ಸೀತೆಯನ್ನು ಕರೆದುಕೊಂಡು ಬರುವದಕ್ಕಾಗಿ ತನ್ನ ಪುಷ್ಪಕ ವಿಮಾನನ್ನು ಕಳುಹಿಸಿ ಅವಳನ್ನು ಯುದ್ಧಭೂಮಿಗೆ ತರಿಸಿದ ತರುವಾಯ ಅವಳಿಗೆ ರಾಮಲಕ್ಷ್ಮಣರು ಮೂರ್ಛಿತರಾಗಿ ಬಿದ್ದುಕೊಂಡಿರುವದನ್ನು ತೋರಿಸಿದನು ಈ ರೀತಿಯಿಂದ ತಾನು ಮಾಡಿದರೆ ರಾಮಲಕ್ಷ್ಮಣರು ಸತ್ತರೆಂದು ಸೀತೆಯು ನಿರಾಶೆಯಾಗಿ ತನ್ನ ಮಾತನ್ನು ಕೇಳಬಹುದೆಂದು ರಾವಣನು ತಿಳಿದುಕೊಂಡಿದ್ದನು. ಆದರೆ ರಾವಣನ ಈ ದುಷ್ಟ ಉದ್ದಿಶ್ಯವು ಸಿದ್ಧಿಗೆಹೋಗಲಿಲ್ಲ. ಯಾಕಂದರೆ ಸೀತೆಯು ರಾಮಲಕ್ಷ್ಮಣರು ಮೂರ್ಛಿತರಾಗಿ ಬಿದ್ದುದನ್ನು ಕಂಡು ಅವರು ಸತ್ತರೆಂದು ಶೋಕಿಸಲಿಕ್ಕೆ ಹತ್ತಿದ ಕೂಡಲೆ ವಿಭೀಷಣನ ಹೆಂಡತಿಯಾದ ಸರಮಾ ಎಂಬವಳು ರಾಮಲಕ್ಷ್ಮಣರು ಸತ್ತಿಲ್ಲವೆಂತಲೂ, ಅವರು ಬರಿಯ ಮೂರ್ಛಿತರಾಗಿ ಬಿದ್ದುಕೊಂಡಿರುತ್ತಾರೆಂತಲೂ ಅವಳಿಗೆ ತಿಳುಹಿಸಿದಳು. ಇದಲ್ಲದೆ ಈ ಯುದ್ಧಚಮತ್ಕಾರವನ್ನು ನೋಡಲಿಕ್ಕೆ ಆಕಾಶದಲ್ಲಿ ಬಂದು ನಿಂತಿದ್ದ ದೇವತೆಗಳಲ್ಲಿ ಗರುಡನು ಸಹ ಇದ್ದನು. ಅವನು ಭುಜಂಗಾಸ್ತ್ರದಿಂದ ರಾಮಲಕ್ಷ್ಮಣರ ದುರ್ದಶೆಯಾದುದನ್ನು ಕಂಡು ಭೂಮಿಯ ಮೇಲೆ ಇಳಿದನು. ಆ ಕೂಡಲೆ ಭುಜಂಗಾಸ್ತ್ರದ ಸಾಮರ್ಥ್ಯವು ಕಡಿಮೆಯಾಗಿ ರಾಮಲಕ್ಷ್ಮಣರು ಎಚ್ಚರಿಕಯನ್ನು ತಾಳಿ ಎದ್ದು ನಿಂತರು. ಆಗ ಪುನಃ ಯುದ್ಧವು ಆರಂಭವಾಯಿತು. ಆ ಯುದ್ಧದಿಂದ ಧೂಮ್ರಾಕ್ಷ, ಚಂದ್ರಾಷ್ಟ್ರ, ಅಕಂಪನ, ಪ್ರಹಸ್ತ ಮೊದಲಾದ ಸಾವಿರಾರು ಮಂದಿ ರಾಕ್ಷಸರು ಸಮರಾಂಗಣದಲ್ಲಿ ಸತ್ತುಬಿದ್ದರು ಇದರಿಂದ ರಾವಣನ ಸೈನ್ಯದಲ್ಲಿ ಬಹಳ ಹಾಹಾಃಕಾರವು ಎದ್ದಿತು. ಆಗ ರಾವಣನು ತನ್ನ ಸೈನಿಕರಿಗೆ ಧೈರ್ಯವನ್ನು ಕೊಡುವದಕ್ಕಾಗಿ

ತಾನೇ ಸ್ವತಃ ಯುದ್ಧಮಾಡುವದಕ್ಕೆ ಬಂದನು. ಆದರೆ ಅವನ ಮೇಲೂ ರಾಮನು ತನ್ನ ಬಾಣಗಳ ಮಳೆಯನ್ನು ಸುರಿಸಿ ಅವನನ್ನು ಜರ್ಝರಮಾಡಿದನು. ಇದರಿಂದ ರಾವಣನು ಯುದ್ಧ ಮಾಡುವದನ್ನು ಬಿಟ್ಟು, ಸಮರಾಂಗಣದಿಂದ ಓಡಿಹೋದನು.

ಈ ಪ್ರಕಾರ ರಾವಣನ ಅಪಜಯವಾಗಲು, ಅವನು ತನ್ನ ತಮ್ಮನಾದ ಕುಂಭಕರ್ಣನನ್ನು ಯುದ್ಧಕ್ಕೆ ಕಳುಹಿಸಿಕೊಡಬೇಕೆಂದು ಆಲೋಚಿಸಿದನು. ಕುಂಭಕರ್ಣನು ಬಹಳ ನಿದ್ದೆಬಡಕನಿದ್ದನು. ಲಂಕೆಯಲ್ಲಿ ಈ ಘನಘೋರಯುದ್ಧವು ನಡೆದರೂ ಅವನಿಗೆ ಇದರ ಸುದ್ದಿಯೇ ಗೊತ್ತಿದ್ದಿಲ್ಲ. ಅವನು ಇನ್ನೂ ಗಾಢ ನಿದ್ರೆಯನ್ನು ನಡೆಸಿದ್ದನು. ಕಡೆಗೆ ರಾವಣನ ಸೇವಕರು ಅನೇಕ ರೀತಿಯಿಂದ ಪ್ರಯತ್ನಮಾಡಿ ಅವನನ್ನು ಎಬ್ಬಿಸಿದರು. ಆಗ ಅವನು ಎಚ್ಚರಾಗಿ ಹೊಟ್ಟೆ ತುಂಬ ಉಂಡು ರಾವಣನನ್ನು ಕಾಣಲಿಕ್ಕ ಹೋದನು. ಅವನಿಗೆ ರಾವಣನು ಯುದ್ಧದ ಯಾವತ್ತು ಸಂಗತಿಯನ್ನು ತಿಳುಹಿಸಿ, ಅವನನ್ನು ಸಮರಾಂಗಣಕ್ಕೆ ಕಳುಹಿಸಿಕೊಟ್ಟನು. ಕುಂಭಕರ್ಣನು ಬಹಳ ಪರಾಕ್ರಮಿಯು ಇದ್ದನು. ಅವನು ಸಾವಿರಾರು ಮಂದಿ ವಾನರ ವೀರರನ್ನೂ ಋಕ್ಷ ವೀರರನ್ನೂ ಸಂಹರಿಸಿ, ರಾಮನ ಸೈನ್ಯದಲ್ಲಿ ಹಾಹಾಃಕಾರವನ್ನುಂಟು ಮಾಡಿದನು. ಆದರೆ ಕೊನೆಗೆ ರಾಮನು ಅವನ ಮೇಲೆ ಸಾಗಿ ಹೋಗಿ, ಅವನನ್ನು ತನ್ನ ಶರವೃಷ್ಟಿಯಿಂದ ಮುಚ್ಚಿ ಸಂಹಾರ ಮಾಡಿದನು.

ಕುಂಭಕರ್ಣನು ಈ ಪ್ರಕಾರ ರಣದಲ್ಲಿ ಮಡೆದುಹೋದ ತರುವಾಯ, ರಾವಣನು ದೇವಾಂತಕ, ನರಾಂತಕ, ತ್ರಿಶಿರ, ಅತಿಕಾಯ ಮೊದಲಾದ ವೀರರನ್ನು ರಣಾಂಗಣಕ್ಕೆ ಕಳುಹಿಸಿದನು. ಅದರೆ ಅವ

ರೆಲ್ಲರು ರಾಮ, ಲಕ್ಷ್ಮಣ, ಸುಗ್ರೀವ, ಹನುಮಂತ ಮೊದಲಾದವರಿಂದ ಸಂಹರಿಸಲ್ಪಟ್ಟರು. ಈ ಪ್ರಕಾರ ರಾವಣನ ಸೈನ್ಯವು ಅಪರಿಮಿತವಾದ ನಾಶವನ್ನು ಹೊಂದಿತು. ಇದನ್ನು ನೋಡಿ, ರಾವಣಪುತ್ರನಾದ ಇಂದ್ರಜಿತುವು ರಾಮಚಂದ್ರನ ಸೈನ್ಯವನ್ನು ನಾಶಪಡಿಸುವ ಸಾಮರ್ಥ್ಯವು ತನ್ನಲ್ಲಿ ಬರಬೇಕೆಂದು ಒಂದು ಪ್ರಕಾರದ ಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿ, ಗುಪ್ತರೀತಿಯಿಂದ ನಿಕುಂಭಿಲೆಗೆ ಹೋಗಿ, ಅಲ್ಲಿ ಆ ಯಜ್ಞಕಾರ್ಯವನ್ನು ಆರಂಭಿಸಿದನು. ಆ ಯಜ್ಞವು ನಿರ್ವಿಘ್ನವಾಗಿ ಸಾಂಗವಾಗಿದ್ದರೆ ಅವನಿಗೆ ಒಂದು ರಥವು ಪ್ರಾಪ್ತವಾಗುತ್ತಿತ್ತು ಹಾಗೂ ಅವನು ಆ ರಥದಲ್ಲಿ ಕುಳಿತು ಯುದ್ಧಮಾಡಿದರೆ ಅಂಜಿಕ್ಯನಾಗುತ್ತಿದ್ದನು ಆದುದರಿಂದ ರಾಮನು ಇಂದ್ರಜಿತುವಿನ ಯಜ್ಞಕ್ಕೆ ಅಡ್ಡಿಯನ್ನು ಮಾಡುವದಕ್ಕಾಗಿ ಲಕ್ಷ್ಮಣನನ್ನು ಕಳುಹಿಸಿಕೊಟ್ಟನು ಆಗ ಇಂದ್ರಜಿತುವು ತನ್ನ ಯಜ್ಞವನ್ನು ಅರ್ಧಕ್ಕೇ ಬಿಟ್ಟುಕೊಟ್ಟು, ತನ್ನ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಲಕ್ಷ್ಮಣನ ಸಂಗಡ ಯುದ್ಧಮಾಡಲಿಕ್ಕೆಸಿದ್ಧನಾದನು ಈ ಯುದ್ಧದಲ್ಲಿ ಲಕ್ಷ್ಮಣನು ಇಂದ್ರಜಿತುವಿನನ್ನು ಕೊಂದುಬಿಟ್ಟನು ರಾವಣನಿಗೆ ತನ್ನ ಮಹಾ ಪರಾಕ್ರಮಿಯಾದ ಪುತ್ರನು ಮಡಿದ ವರ್ತಮಾನವು ತಿಳಿಯಲಾಗಿ, ಅವನು ತನ್ನ ಗತಿಯು ಇನ್ನು ಮೇಲೆ ಚೆನ್ನಾಗಿ ಆಗುವದಿಲ್ಲೆಂದು ಕೈಕಾಲುಕಳಕೊಂಡನು. ಆದರೂ ಅವನು ಸ್ವಾಭಿಮಾನಿಯೂ, ನುಡಿಯಂತೆ ನಡೆಯುವಲ್ಲಿ ತತ್ಪರನೂ ಇದ್ದುದರಿಂದ, ಅವನು ರಾಮನಿಗೆ ಶರಣುಹೋಗುವ ವಿಚಾರವನ್ನು ಒಂದು ಕ್ಷಣಹೊತ್ತು ಸಹ ತನ್ನ ಮನಸ್ಸಿನಲ್ಲಿ ತಾರದೆ, ಪುನಃ ಧೈರ್ಯವನ್ನು ಹಿಡಿದು, ತನ್ನ ರಾಕ್ಷಸವೀರರನ್ನು ಕೂಡಿಕೊಂಡು ರಾಮಲಕ್ಷ್ಮಣರ ಸಂಗಡ ಯುದ್ಧಮಾಡಲಿಕ್ಕೆ ಬಂದನು. ಈ

ಪ್ರಸಂಗದಲ್ಲಿ ಆ ಯುದ್ಧವು ಅತಿಭಯಂಕರವಾಗಿ ನಡೆಯಿತು. ಅದರಲ್ಲಿ ಉಭಯಪಕ್ಷದ ಸಾವಿರಾರು ಮಂದಿ ವೀರರು ಸತ್ತದ್ದರಿಂದ ಅವರ ಪ್ರೇತಗಳ ರಾಶಿಯು ಭೂಮಿಯ ಮೇಲೆ ಪರ್ವತಪ್ರಾಯವಾಗಿ ಬಿದ್ದಿತು. ರಕ್ತದ ನದಿಗಳು ಹರಿದವು ಒಟ್ಟಿಗೆ ಈ ಸಮಯದ ಯುದ್ಧಭೂಮಿಯ ನೋಟವು ಬಹಳ ಭಯಂಕರವಾಗಿತ್ತು. ಈ ಪ್ರಕಾರ ಈ ಘನಘೋರವಾದ ಯುದ್ಧವು ಬಹಳ ಹೊತ್ತಿನ ವರೆಗೆ ನಡೆಯಿತು ಆದರೆ ರಾಮಲಕ್ಷ್ಮಣರ ಶರಸಂಧಾನದ ಮುಂದೆ ಮತ್ತು ವಾನರ ಋಕ್ಷರ ಸಾಮರ್ಥ್ಯದ ಮುಂದೆ ರಾವಣನ ಆಟವು ಏನೂ ನಡೆಯಲಿಲ್ಲ. ಕಡೆಗೆ ರಾವಣನು ರಾಮನ ತೀಕ್ಷ್ಣವಾದ ಬಾಣಗಳ ಪೆಟ್ಟಿನಿಂದ ಮಡೆದುಹೋದನು. ಈ ಪ್ರಕಾರ ರಾಮರಾವಣರ ಯುದ್ಧವು ಮುಗಿದುಹೋಯಿತು

ಆ ಬಳಿಕ ರಾಮನು ವಿಭೀಷಣನನ್ನು ಅಶೋಕವನಕ್ಕೆ ಕಳುಹಿಸಿ, ಸೀತೆಯನ್ನು ತನ್ನ ಕಡೆಗೆ ಕರೆಯಿಸಿಕೊಂಡನು. ಆದರೆ ಅವಳನ್ನು ಸ್ವೀಕರಿಸಬೇಕೋ ಸ್ವೀಕರಿಸಬಾರದೋ ಎಂಬ ಬಗ್ಗೆ ಅವನ ಮನಸ್ಸಿನಲ್ಲಿ ಸಂಶಯವು ಉತ್ಪನ್ನವಾಯಿತು. ಆಗ ಅವನು ಸೀತೆಗೆ—«ಸೀತೆಯೇ, ನೀನು ಲಂಕೆಯೊಳಗೆ ರಾಕ್ಷಸ ಸಮೂಹದಲ್ಲಿ ಬಹಳ ದಿವಸಗಳನ್ನು ಕಳೆದರೂ ನಿನ್ನ ಪವಿತ್ರತೆಯು ಭಂಗವಾಗಿಲ್ಲವೆಂಬುವದು ನನಗೆ ಗೊತ್ತುಂಟು. ಆದರೂ ನೀನು ಈ ಎಲ್ಲ ಜನರಿಗೆ ಮನವರಿಕೆಯಾಗುವಂತೆ ನಿನ್ನ ಪವಿತ್ರತೆಯನ್ನು ಸಿದ್ಧಮಾಡಿಕೊಡು. ಇಲ್ಲದಿದ್ದರೆ ನಾನು ನಿನ್ನನ್ನು ಸ್ವೀಕಾರಮಾಡಲಾರೆನು" ಎಂದು ನುಡಿದನು. ಸೀತೆಯು ತನ್ನ ಪತಿಯ ಬಾಯಿಂದ ಹೊರಟ ಈ ಶಬ್ದಗಳನ್ನು ಕೇಳಿ ಸಿಟ್ಟಿಗೆದ್ದು — "ಪ್ರಾಣನಾಧರೇ, ನಾನು ಕಾಯಾವಾಚಾಮನಸ್ಸುಗಳಿಂದ ಅತ್ಯಂತ ಪವಿತ್ರಳಿರುತ್ತೇನೆ.

ನನ್ನ ಪವಿತ್ರತೆಯ ಬಗ್ಗೆ ನಿಮಗೆ ಸಂಶಯವಿದ್ದರೆ ನಾನು ಅಗ್ನಿಕುಂಡದಲ್ಲಿ ಹಾರಿಕೊಳ್ಳುವೆನು. ನನಗೆ ಈ ದುಃಖಮಯ ಜೀವಿತದ ಬಗ್ಗೆ ಬಹಳ ಬೇಸರವು ಬಂದಿರುತ್ತದೆ'' ಎಂದು ಉತ್ತರಕೊಟ್ಟು, ಲಕ್ಷ್ಮಣನ ಕೈಯಿಂದ ಒಂದು ಚಿತೆಯನ್ನು ರಚಿಸಿ ಅದು ಅಗ್ನಿಸಂಸ್ಕಾರದಿಂದ ಪೂರ್ಣವಾಗಿ ಪ್ರಜ್ವಲಿತವಾದ ಬಳಿಕ, ಅದರಲ್ಲಿ ಹಾರಿಕೊಂಡಳು. ಆದರೆ ಅದರ ಜ್ವಾಲೆಗಳಿಂದ ಆಕೆಯ ದೇಹಕ್ಕೆ ಕಿಂಚಿತ್ತಾದರೂ ಅಪಾಯವುಂಟಾಗಲಿಲ್ಲ ಇಷ್ಟೇ ಅಲ್ಲ, ಪ್ರತ್ಯಕ್ಷ ಅಗ್ನಿಯು ಮನುಷ್ಯರೂಪವನ್ನು ಧಾರಣಮಾಡಿ, ಸೀತೆಯನ್ನು ಕೈಯಲ್ಲಿ ಹಿಡಿದುಕೊಂಡು ರಾಮನ ಮುಂದೆ ಬಂದು ನಿಂತು—"ರಾಮನೇ, ನಿನ್ನ ಪತ್ನಿಯು ಅತ್ಯಂತ ನಿರ್ಮಲಳಿರುತ್ತಾಳೆ ನೀನು ಇವಳ ಪವಿತ್ರತೆಯ ಬಗ್ಗೆ ಕಿಂಚಿತ್ತಾದರೂ ಸಂಶಯವನ್ನು ತೆಗೆದುಕೊಳ್ಳಬೇಡ ನೀನು ಇವಳನ್ನು ನಿರ್ಮಲ ಮನಸ್ಸಿನಿಂದ ಸ್ವೀಕಾರಮಾಡು" ಎಂದು ಹೇಳಿದನು.

ಈ ಪ್ರಕಾರ ಅಗ್ನಿಯು ಮಾಡಿದ ಆಜ್ಞೆಯನ್ನು ರಾಮಚಂದ್ರನು ಮಾನ್ಯಮಾಡಿದನು. ಇಷ್ಟರಲ್ಲಿ ದಶರಥರಾಜನು ಇಂದ್ರಾದಿ ದೇವತೆಗಳನ್ನೊಡಗೊಂಡು ಅಲ್ಲಿಗೆ ಬಂದು—"ನೀನು ನಿನ್ನ ಮನಸ್ಸಿನಲ್ಲಿ ಸೀತೆಯ ಬಗ್ಗೆ ಏನೂ ಶಂಕೆಯನ್ನು ತೆಗೆದುಕೊಳ್ಳಬೇಡ" ಎಂದು ಹೇಳಿದನು. ಇಂದ್ರನು—"ಎಲೈ ರಾಮಚಂದ್ರನೇ, ನೀನು ರಾವಣನನ್ನು ಕೊಂದು ತ್ರೈಲೋಕ್ಯದ ಭೀತಿಯನ್ನು ದೂರ ಮಾಡಿದೆ. ಆದುದರಿಂದ ನಾನು ನಿನಗೆ ಪ್ರಸನ್ನನಾಗಿದ್ದೇನೆ ನನ್ನ ಕಡೆಯಿಂದ ಬೇಕಾದ ವರವನ್ನು ಬೇಡಿಕೋ'' ಎಂದು ಹೇಳಿದನು. ಆಗ ರಾಮನು ಅಲ್ಲಿ ಸತ್ತುಬಿದ್ದ ವಾನರರನ್ನೂ ಋಕ್ಷರನ್ನೂ ಸಜೀವ ಮಾಡಬೇಕೆಂದು ಬೇಡಿಕೊಂಡನು. ಕೂಡಲೆ



ರಾಮಚಂದ್ರನು ಭರತನನ್ನು ಕಾಣುವದಕ್ಕಾಗಿ ನಂದಿ
ಗ್ರಾಮಕ್ಕೆ ಬಂದನು. (ಪುಟ ೫೧)

C. P. D.

ರಾಮನ ಸೈನ್ಯದಲ್ಲಿಯ ಸತ್ತುಬಿದ್ದ ವೀರರು ಜೀವಂತರಾದರು ಆಗ ಎಲ್ಲರಿಗೂ ಬಹಳ ಆನಂದವಾಯಿತು. ಆ ಬಳಿಕ ಎಲ್ಲರೂ ಅಯೋಧ್ಯೆಗೆ ಹೋಗುವ ಸಿದ್ಧತೆಯನ್ನು ಮಾಡಿದರು. ಕುಬೇರ ನಿಂದ ರಾವಣನು ಪಡೆದುಕೊಂಡಿದ್ದ ಪುಷ್ಪಕವಿಮಾನವನ್ನು ವಿಭೀ ಷಣನು ರಾಮನಿಗೆ ಅಯೋಧ್ಯೆಗೆ ಹೋಗುವದಕ್ಕಾಗಿ ಕೊಟ್ಟನು. ಮೊದಲು ಗೊತ್ತಾದ ಮೇರೆಗೆ ವಿಭಿಷಣನಿಗೆ ಲಂಕೆಯ ರಾಜ್ಯಾ ಭಿಷೇಕವು ಮಾಡಲ್ಪಟ್ಟಿತು. ಬಳಿಕ ವಿಭೀಷಣ, ಸುಗ್ರೀವ ಮೊದಲಾದ ಯಾವತ್ತು ವೀರರು ಪುಷ್ಪಕವಿಮಾನದಲ್ಲಿ ಕುಳಿತು ಅಯೋಧ್ಯೆಗೆ ಹೋಗುವದಕ್ಕಾಗಿ ಹೊರಟರು ಆ ವಿಮಾನದಲ್ಲಿ ಸೀತಾದೇವಿಯು ರಾಮಚಂದ್ರನ ಹತ್ತರ ಕುಳಿತಿದ್ದಳು. ಮಾರ್ಗ ದಲ್ಲಿ ಆ ಇಬ್ಬರೂ ಅನೇಕ ಚಮತ್ಕಾರಗಳನ್ನು ನೋಡಿದರು. ಆ ಕಾಲಕ್ಕೆ ಅವರಿಬ್ಬರಿಗೂ ತಮ್ಮ ವನವಾಸದಲ್ಲಿಯ ಯಾವತ್ತು ಪ್ರಸಂಗಗಳು ನೆನವಾದವು ಅವರು ನಂದಿಗ್ರಾಮಕ್ಕೆ ಬಂದು, ಭರತನನ್ನು ಕಾಣುವದಕ್ಕಾಗಿ ವಿಮಾನದೊಳಗಿಂದ ಕೆಳಗೆ ಇಳಿ ದರು. ಆಗ ಹದಿನಾಲ್ಕು ವರ್ಷಗಳು ಮುಗಿದುದರಿಂದ ಭರ ತನು ಬಹಳ ಉತ್ಸುಕತೆಯಿಂದ ರಾಮಚಂದ್ರನ ಆಗಮನವನ್ನು ನಿರೀಕ್ಷಿಸುತ್ತ ನಿಂತಿದ್ದನು ರಾಮಚಂದ್ರಸಹವರ್ತಮಾನ ಯಾ ವತ್ತು ಜನರು ಅಲ್ಲಿಗೆ ಬಂದುದನ್ನು ನೋಡಿ, ಭರತನ ನೇತ್ರಗಳು ಪ್ರೇಮಾಶ್ರುಗಳಿಂದ ತುಂಬಿಹೋದವು. ಮುಂದೆ ಆ ಯಾವತ್ತು ಜನರು ಬಹುಮೂಲ್ಯವಾದ ವಸ್ತ್ರಗಳನ್ನು ಪರಿಧಾನಮಾಡಿ ಸಮಾ ರಂಭದಿಂದ ಅಯೋಧ್ಯೆಗೆ ಹೋದರು. ಅಲ್ಲಿ ಮೊದಲಿಗೆ ಕೈಕೆ ಯಿಯು ವಿಘ್ನದಗೋಸ್ಕರ ತಡೆದಿದ್ದ ರಾಮನ ರಾಜ್ಯಾಭಿಷೇಕ ಸಮಾರಂಭವನ್ನು ವಸಿಷ್ಠಾದಿಕರು ವಿಜೃಂಭಣೆಯಿಂದ ನೆರವೇರಿಸಿ

ದರು ಆಗ ಶ್ರೀ ರಾಮಚಂದ್ರನು ಸೀತೆಯನ್ನೊಡಗೊಂಡು ಅಯೋಧ್ಯೆಯ ಸಿಂಹಾಸನದ ಮೇಲೆ ಆರೂಢನಾದನು.

## ೭. ಉತ್ತರಕಾಂಡ.

(ಶ್ರೀ ರಾಮಚಂದ್ರನ ರಾಜ್ಯಾಭಿಷೇಕದ ತರುವಾಯ ನಡೆದ ಸಂಗತಿಗಳು ಇದರಲ್ಲಿ ವಿವರಿಸಲ್ಪಟ್ಟಿರುವಕಾರಣ ಇವಕ್ಕೆ "ಉತ್ತರಕಾಂಡ" ಎಂಬ ಹೆಸರು ಬಂದಿರುವದು)

ಶ್ರೀ ರಾಮಚಂದ್ರನಿಗೆ ರಾಜ್ಯಾಭಿಷೇಕವಾದ ಕಾರಣದಿಂದ ಅವನಿಗೆ ಆಶೀರ್ವಾದ ಮಾಡುವದಕ್ಕೋಸ್ಕರ ನಾಲ್ಕೂ ದಿಕ್ಕುಗಳಿಂದ ಋಷಿಗಳು ಬಂದರು. ಶ್ರೀ ರಾಮಚಂದ್ರನು ಅವರಿಗೆ ಯಥಾವಿಧಿ ಪೂಜನವನ್ನು ಮಾಡಿ ಅವರ ಕ್ಷೇಮ-ಕುಶಲಗಳನ್ನು ವಿಚಾರಿಸಿದನು ಅವರೆಲ್ಲರು ತಮ್ಮ ಕುಶಲಗಳನ್ನು ತಿಳುಹಿಸಿ ತ್ರೈಲೋಕ್ಯವನ್ನು ಪೀಡಿಸುತ್ತಿದ್ದ ರಾವಣನ ಸಂಹಾರಮಾಡಿದುದಕ್ಕಾಗಿ ಶ್ರೀ ರಾಮಚಂದ್ರನ ಪರಾಕ್ರಮುವನ್ನು ಬಹಳವಾಗಿ ಕೊಂಡಾಡಿದರು. ಆ ಮೇಲೆ ಅವರು ಕೆಲವು ದಿವಸಗಳ ವರೆಗೆ ಅಯೋಧ್ಯೆಯಲ್ಲಿದ್ದು, ಶ್ರೀ ರಾಮಚಂದ್ರನನ್ನು ಆಶೀರ್ವದಿಸಿ, ತಮ್ಮ ತಮ್ಮ ಆಶ್ರಮುಗಳಿಗೆ ಹೊರಟುಹೋದರು ಶ್ರೀ ರಾಮಚಂದ್ರನ ಧನ್ಯವಾದವನ್ನು ಮಾಡುವದಕ್ಕಾಗಿ ನಾನಾ ದೇಶಗಳ ರಾಜರು ಅಯೋಧ್ಯೆಗೆ ಬಂದಿದ್ದರು. ಅವರನ್ನು ಶ್ರೀ ರಾಮಚಂದ್ರನು ಬಹಳ ಉತ್ತಮ ರೀತಿಯಿಂದ ಸತ್ಕಾರಮಾಡಿ, ಕೆಲವು ದಿವಸ ಅವರನ್ನು ತನ್ನ ನಗರದಲ್ಲಿಟ್ಟುಕೊಂಡು, ಅವರಿಗೆ ಯೋಗ್ಯರೀತಿಯಿಂದ ಸನ್ಮಾನಮಾಡಿ ಅವರನ್ನು ಕಳುಹಿಸಿಕೊಟ್ಟನು.

ಈ ಪ್ರಕಾರ ಹೊರಗಿನಿಂದ ಬಂದಿದ್ದ ಋಷಿಗಳು, ರಾಜರು, ಮೊದಲಾದ ಜನರು ಅಯೋಧ್ಯಾನಗರದಿಂದ ಹೊರಟುಹೋದ ನಂತರ ಶ್ರೀ ರಾಮಚಂದ್ರನು ತನ್ನ ರಾಜ್ಯಕಾರಭಾರದಲ್ಲಿ ಹೆಚ್ಚು ಮನಸ್ಸುಹಾಕಿ, ತನ್ನ ಮಂತ್ರಿಗಳ ಕೆಲಸದ ಕಡೆಗೆ ಹೆಚ್ಚು ಲಕ್ಷ್ಯ ವನ್ನಿಟ್ಟು, ಮಹತ್ವದ ಕೆಲಸಗಳನ್ನು ತಾನೇ ಸ್ವತಃ ಮಾಡತೊಡಗಿ ದನು. ಅವನು ಸ್ವತಃ ನೀತಿವಂತನೂ, ಧರ್ಮನಿಷ್ಠನೂ ಇದ್ದುದ ರಿಂದ ಅವನ ಪ್ರಜೆಗಳು ಬಹಳ ಸುಖದಿಂದ ಇರಹತ್ತಿದರು. ಇದ ಲ್ಲದೆ ಅವನು ತನ್ನ ಮನೆಯೊಳಗಿನ ಜನರ ಸಂಗಡ ಬಹಳ ಪ್ರೀತಿ ಯಿಂದ ನಡೆದುಕೊಳ್ಳುತ್ತಿದ್ದುದರಿಂದ ಅವರೆಲ್ಲರು ಸಹ ಬಹಳ ಆನಂದದಿಂದ ಇರಹತ್ತಿದರು.

ಈ ರೀತಿಯಿಂದ ಕೆಲವು ದಿವಸಗಳು ಹೋದ ತರುವಾಯ ರಾಮನು ಸುಗ್ರೀವ, ಅಂಗದ, ಜಾಂಬುವಂತ ಮೊದಲಾದ ವಾನರ ವೀರರಿಗೂ, ಋಕ್ಷವೀರರಿಗೂ, ವಿಭೀಷಣಾದಿ ರಾಕ್ಷಸವೀರರಿಗೂ ತಮ್ಮ ತಮ್ಮ ದೇಶಕ್ಕೆ ತಿರುಗಿಹೋಗಲಕ್ಕೆ ನಿರೂಪವನ್ನು ಕೊಟ್ಟನು. ಈ ವಿಯೋಗದ ಪ್ರಸಂಗವು ಉಭಯತರಿಗೂ ಬಹಳ ದುಃಖಕರ ವಾಗಿ ಪರಿಣಮಿಸಿತು. ವಿಶೇಷವಾಗಿ ಹನುಮಂತನಿಗೆ ನಿರೂಪ ಕೊಡುವಾಗ ರಾಮನ ಕುತ್ತಿಗೆಯ ನರಗಳು ದುಃಖದಿಂದ ಉಬ್ಬಿ ಹೋಗಿ ಅವನ ಬಾಯಿಂದ ಮಾತುಗಳು ಸಹ ಹೊರಬೀಳಲಿಲ್ಲ. ಅವರೆಲ್ಲರಿಗೂ ರಾಮಚಂದ್ರನು ಬಹುಮೂಲ್ಯವಾದ ಭೂಷಣ ಗಳನ್ನು ಕೊಟ್ಟು ಅವರನ್ನು ಆದರದಿಂದ ಕಳುಹಿಸಿಕೊಟ್ಟನು

ಈ ಯಾವತ್ತು ವೀರರು ಹೊರಟುಹೋದ ಕೆಲವು ದಿವಸ ಗಳ ತರುವಾಯ ಸೀತಾದೇವಿಯು ಗರ್ಭಿಣಿಯಾದಳು ಆಗ ಒಂದು ದಿವಸ ಶ್ರೀ ರಾಮಚಂದ್ರನು ಅವಳಿಗೆ ಪ್ರೇಮದಿಂದ— "ಪ್ರಿಯೇ,

ನಿನಗೆ ಏನಾದರೂ ಬಯಕೆಗಳು ಆದಲ್ಲಿ ನೀನು ಅವುಗಳನ್ನು ನನ್ನ ಮುಂದೆ ನಿಶ್ಶಂಕೆಯಿಂದ ಹೇಳು. ನಾನು ಅವುಗಳನ್ನು ಅವಶ್ಯವಾಗಿ ಪೂರ್ಣಮಾಡುವೆನು" ಎಂದು ಹೇಳಿದನು. ಅದಕ್ಕೆ ಸೀತಾದೇವಿಯು—"ಪತಿರಾಜನೇ, ಗಂಗಾತೀರದ ಮೇಲಿರುವ ಆಶ್ರಮದಲ್ಲಿ ವಾಸಿಸುವ ಮುನಿಗಳ ಸ್ತ್ರೀಯರಿಗೆ ಉತ್ತಮವಾದ ವಸ್ತ್ರಾಲಂಕಾರಗಳನ್ನು ಕೊಟ್ಟು ಬರಬೇಕೆಂದು ನನ್ನ ಮನಸ್ಸು ಹಾ ತೊರಿಯುತ್ತದೆ" ಎಂದು ಉತ್ತರಕೊಟ್ಟಳು. ಆಗ ರಾಮಚಂದ್ರನು-"ನಿನ್ನ ಮನಸ್ಸಿನಲ್ಲಿದ್ದಂತೆಯೇ ನಾನು ನಿನ್ನನ್ನು ಅಲ್ಲಿಗೆ ಕಳುಹಿಸಿ ಕೊಡುವ ವ್ಯವಸ್ಥೆಯನ್ನು ಬಹು ಬೇಗನೆ ಮಾಡುತ್ತೇನೆ" ಎಂಬ ದಾಗಿ ಆನಂದದಿಂದ ವಚನಕೊಟ್ಟನು ಈ ಪ್ರಕಾರ ವಚನಕೊಟ್ಟ ತರುವಾಯ ರಾಮಚಂದ್ರನು ತನ್ನ ರಾಜ್ಯದ ಕೆಲಸಗಳನ್ನು ನೋಡು ವದಕ್ಕಾಗಿ ರಾಜಸಭೆಗೆ ಹೊರಟುಹೋದನು. ಆ ಸಭೆಯಲ್ಲಿ ಒಬ್ಬ ಗುಪ್ತ ಪರಿಚಾರಕನು ಬಂದು—"ಮಹಾರಾಜರೇ, ಯಾವತ್ತು ಜನರು ನಿಮ್ಮ ಗುಣವನ್ನೂ ಪರಾಕ್ರಮವನ್ನೂ ವರ್ಣಿಸುತ್ತಾರೆ ಆದರೆ ಸೀತಾದೇವಿಯು ಕೆಲವು ದಿವಸ ರಾಕ್ಷಸರ ಸಮೂಹದಲ್ಲಿ ಇರುತ್ತಿದ್ದಕಾರಣ ಅವಳನ್ನು ನೀವು ಅಂಗೀಕರಿಸಿದ್ದಕ್ಕಾಗಿ ಕೆಲವು ಜನರು ನಿಮಗೆ ದೂಷಣಮಾಡುತ್ತಾರೆ" ಎಂದು ಹೇಳಿದನು ಈ ಗುಪ್ತಪರಿಚಾರಕನ ಬಾಯಿಂದ ಬಂದ ಶಬ್ದಗಳನ್ನು ಕೇಳಿದ ಕೂ ಡಲೆ ರಾಮಚಂದ್ರನಿಗೆ ಬಹಳ ದುಃಖವಾಯಿತು ಆದರೂ ಅವನು ಪ್ರಜೆಗಳನ್ನು ಸಂತೋಷಪಡಿಸುವದಕ್ಕಾಗಿ ಸೀತೆಯನ್ನು ತ್ಯಾಗ ಮಾಡಬೇಕೆಂದು ನಿಶ್ಚಯಿಸಿದನು.

ಆ ಮೇಲೆ ರಾಮಚಂದ್ರನು ಲಕ್ಷ್ಮಣನನ್ನು ಕರೆಕಳುಹಿಸಿ:—"ಲಕ್ಷ್ಮಣಾ, ನಾನು ಸೀತೆಯನ್ನು ಅಂಗೀಕರಿಸಿದ್ದಕ್ಕಾಗಿ ಜನರು

ನನಗೆ ದೂಷಣವನ್ನು ಮಾಡುತ್ತಾರೆ. ಜನರನ್ನು ಸಂತೋಷಗೊಳಿಸುವದು ರಾಜರ ಮುಖ್ಯ ಕರ್ತವ್ಯವಿರುತ್ತದೆ. ಆದುದರಿಂದ ನಾನು ನನ್ನ ಪ್ರಿಯ ಪತ್ನಿಯನ್ನು ತ್ಯಾಗಮಾಡುವೆನು. ನೀನು ಅವಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಹೋಗಿ ಗಂಗಾನದಿಯ ಆಚೆಗೆ ಇರುವ ತಮಸಾನದಿಯ ತೀರದಲ್ಲಿ ವಾಲ್ಮೀಕಿ ಋಷಿಯ ಆಶ್ರಮದ ಹತ್ತರ ಬಿಟ್ಟು ಬಾ" ಎಂದು ಹೇಳಿದನು. ಲಕ್ಷ್ಮಣನು ಅಣ್ಣನ ಆಜ್ಞೆಯಂತೆ ಸೀತಾದೇವಿಯನ್ನು ರಥದಲ್ಲಿ ಕುಳ್ಳಿರಿಸಿಕೊಂಡು, ಅಯೋಧ್ಯಾನಗರದಿಂದ ಕರೆದುಕೊಂಡು ಹೋಗಿ, ವಾಲ್ಮೀಕಿ ಋಷಿಯ ಆಶ್ರಮದ ಸಮೀಪದಲ್ಲಿ ಇಳಿಸಿ, ಕಣ್ಣಿಗೆ ನೀರು ತಂದು ಬಹಳ ದುಃಖದಿಂದ—"ದೇವಿಯೇ! ರಾಮಚಂದ್ರನು ನಿನ್ನನ್ನು ಇಲ್ಲಿ ಬಿಟ್ಟುಬರಬೇಕೆಂದು ನನಗೆ ಆಜ್ಞೆಯನ್ನು ಮಾಡಿರುತ್ತಾನೆ ನಾನು ಇನ್ನು ಹೋಗಿಬರುತ್ತೇನೆ. ದೇವರು ನಿನಗೆ ಕಲ್ಯಾಣಮಾಡಲಿ!" ಎಂದು ನುಡಿದನು ಅದಕ್ಕೆ ಸೀತೆಯು:—"ಮೈದುನದೇವರೇ, ನಾನು ನನ್ನ ಪ್ರಾಣನಾಥರ ಆಜ್ಞೆಯನ್ನು ಶಿರಸಾಮಾನ್ಯಮಾಡಿ ಈ ವನವಾಸವನ್ನು ಆನಂದದಿಂದ ಭೋಗಿಸುತ್ತೇನೆ. ಆದರೆ ಅವರ ಸೇವೆಯನ್ನು ಮಾಡುವದು ತಪ್ಪಿದ್ದಕ್ಕಾಗಿ ನನಗೆ ಬಹಳ ವ್ಯಸನವಾಗುತ್ತದೆಂದು ಅವರಿಗೆ ತಿಳುಹಿಸಿರಿ" ಎಂದು ಹೇಳಿದಳು ಇದನ್ನು ಕೇಳಿ ಲಕ್ಷ್ಮಣನಿಗೂ ಬಹಳ ದುಃಖವುಂಟಾಗಿ, ಅವನು ಒಂದು ತುಟಿ ಎರಡು ಮಾಡದೆ ಹೊರಟುಹೋದನು. ಇತ್ತಲಾ ಸೀತೆಯು ನಿರಾಧಾರಿಯಾಗಿ ದೊಡ್ಡ ಧ್ವನಿತೆಗೆದು ಅಳಹತ್ತಿದಳು. ಆಗ ಅವಳ ಕಡೆಗೆ ಪರಮದಯಾಳು ವಾಲ್ಮೀಕಿ ಋಷಿಗಳು ಬಂದು, ಅವಳಿಗೆ ಅಳಬೇಡವೆಂದು ನಾಲ್ಕು ಬುದ್ಧಿಯ ಮಾತುಗಳನ್ನು ಹೇಳಿ, ಅವಳನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡುಹೋದರು. ಆ ಆಶ್ರಮದಲ್ಲಿ

ವಾಲ್ಮೀಕಿ ಋಷಿಗಳು ಅವಳನ್ನು ತಮ್ಮ ಮಗಳಂತೆ ಪಾಲನಪೋಷಣ ಮಾಡಿದರು. ಗರ್ಭವತಿಯಾದ ಸೀತೆಗೆ ಪೂರ್ಣ ದಿವಸಗಳು ತುಂಬಲಾಗಿ ಅವಳು ಸುಂದರ ಮತ್ತು ತೇಜಸ್ವಿಯಾದ ಇಬ್ಬರು ಗಂಡುಮಕ್ಕಳನ್ನು ಹೆತ್ತಳು. ಅವರ ಹೋಲಿಕೆಯು ಪ್ರತಿ ರಾಮ ಚಂದ್ರನಂತೆಯೇ ಇದ್ದಿತು ವಾಲ್ಮೀಕಿ ಋಷಿಗಳು ಒಬ್ಬನಿಗೆ ಕುಶ ನೆಂತಲೂ, ಇನ್ನೊಬ್ಬನಿಗೆ ಲವನೆಂತಲೂ ನಾಮಕರಣಮಾಡಿದರು. ಆ ಹುಡುಗರು ವಾಲ್ಮೀಕಿ ಋಷಿಗಳ ಶಿಕ್ಷಣದಿಂದ ಶಸ್ತ್ರಾಸ್ತ್ರ ವಿದ್ಯೆ ಯಲ್ಲಿ ಬಹಳ ನಿಷ್ಣಾತರಾದರು. ಇತ್ತಲಾ ರಾಮಚಂದ್ರನು ಅಶ್ವ ಮೇಧಯಜ್ಞ ಮಾಡುವದನ್ನು ನಿರ್ಧರಿಸಿ ಬೇರೆ ಬೇರೆ ಕಡೆಯ ಋಷಿಗಳಿಗೆ ಬರಲಿಕ್ಕೆ ಆಮಂತ್ರಣವನ್ನು ಕಳುಹಿಸಿಕೊಟ್ಟನು. ಆಗ ವಾಲ್ಮೀಕಿ ಋಷಿಗಳು ಕುಶ ಮತ್ತು ಲವರನ್ನು ಕರೆದುಕೊಂಡು ಬಂದರು. ವಾಲ್ಮೀಕಿ ಋಷಿಗಳು ಆ ಹುಡುಗರಿಗೆ ಶ್ರೀ ರಾಮ ಚಂದ್ರನ ವರ್ಣನದ ಕಾವ್ಯವನ್ನು ಕಲಿಸಿದ್ದರು. ಆ ಹುಡುಗರು ಆ ಕಾವ್ಯವನ್ನು ದಿನಾಲು ತಮ್ಮ ಸುಸ್ವರದಿಂದ ಹಾಡಿ ಅಯೋಧ್ಯಾ ವಾಸಿ ಜನರ ಮನೋರಂಜನವನ್ನು ಮಾಡಹತ್ತಿದರು. ಅವರ ಗಾಯನದ ಕೀರ್ತಿಯು ಬೇಗನೆ ರಾಮನ ಕಿವಿಗೆ ಮುಟ್ಟಿತು. ಆಗ ಅವನು ಆ ಹುಡುಗರನ್ನು ಕರೆಯಿಸಿ ಅವರ ಬಾಯಿಂದ ಆ ಕಾವ್ಯವನ್ನು ಕೇಳಿದನು. ಅವರ ಮಧುರ ಧ್ವನಿಯು, ಮೋಹಕ ಸ್ವರೂಪವು, ವಿನಯಶೀಲ ಭಾಷಣವು ರಾಮಚಂದ್ರನ ಮನಸ್ಸನ್ನು ಆಕರ್ಷಣಮಾಡಿದವು ಆಗ ಅವನು ವಾಲ್ಮೀಕಿ ಋಷಿಗಳಿಗೆ— "ಈ ಹುಡುಗರು ಯಾರ ಮಕ್ಕಳು?" ಎಂದು ಕೇಳಿದನು ಅದಕ್ಕೆ ವಾಲ್ಮೀಕಿ ಋಷಿಗಳು—"ನಿನ್ನ ಸತಿಯೂ, ಮಹಾ ಸಾಧ್ವಿಯೂ ಆದ ಸೀತೆಯಿಂದ ಜನಿಸಿದ ಈ ಮಕ್ಕಳನ್ನು ನಾನು ನಿನ್ನ ಸ್ವಾಧೀ

ನಕ್ಕೆ ಒಪ್ಪಿಸಲಿಕ್ಕೆ ನನ್ನ ಸಂಗಡ ಕರೆದುಕೊಂಡು ಬಂದಿರುತ್ತೇನೆ" ಎಂದು ಹೇಳಿದರು

ಇದನ್ನು ಕೇಳಿದ ಕೂಡಲೆ ರಾಮಚಂದ್ರನ ಕಣ್ಣೊಳಗೆ ನೀರು ಬಂದವು. ಅವನು ಕುಶ ಮತ್ತು ಲವರನ್ನು ಎದೆಗೆ ಅವಚಿಕೊಂಡು ವಾಲ್ಮೀಕಿ ಋಷಿಯ ಕಡೆಗೆ ನೋಡಿ—"ಸ್ವಾಮಿನ್, ನನ್ನ ಸತಿಯು ಪವಿತ್ರಳಿರುತ್ತಾಳೆಂಬುವದು ನನಗೆ ಗೊತ್ತುಂಟು. ಆದರೂ ಅವಳು ನನ್ನ ನಗರದೊಳಗಿನ ಜನರ ಮನವರಿಕೆಯನ್ನು ಮಾಡಿಕೊಡು ವದಕ್ಕಾಗಿ ಪುನಃ ಯಾವದಾದರೂ ದಿವ್ಯ ಚಮತ್ಕಾರವನ್ನು ಮಾಡು ವದಕ್ಕೆ ಸಿದ್ಧಳಿದ್ದಲ್ಲಿ ನಾನು ಅವಳನ್ನು ಪುನಃ ಅಂಗೀಕಾರಮಾಡು ವೆನು!" ಎಂದು ಹೇಳಿದನು. ಆಗ ವಾಲ್ಮೀಕಿ ಋಷಿಗಳು ಸೀತೆ ಯನ್ನು ಅಲ್ಲಿಗೆ ಕರೆಯಿಸಿ ಪುನಃ ದಿವ್ಯಚಮತ್ಕಾರವನ್ನು ಮಾಡು ವದಕ್ಕೆ ಅವಳ ಪತಿಯು ಹೇಳುತ್ತಾನೆಂದು ತಿಳುಹಿಸಿದರು. ಆ ಕೂಡಲೆ ಅವಳು ತನ್ನ ಎರಡೂ ಕೈ ಜೋಡಿಸಿ—"ಎಲೈ ಭೂಮಾತೇ! ರಘುರಾಯನ ಹೊರತಾಗಿ ನಾನು ಎರಡನೇ ಪುರುಷನನ್ನು ಮನಸ್ಸಿ ನಲ್ಲಿ ಸಹ ಚಿಂತನಮಾಡದೆ ಇದ್ದಲ್ಲಿ ನನ್ನನ್ನು ನಿನ್ನ ಹೊಟ್ಟೆಯಲ್ಲಿ ತೆಗೆದುಕೋ" ಎಂದು ಪ್ರಾರ್ಥಿಸಿದಳು ಈ ಶಬ್ದಗಳು ಸೀತೆಯ ಬಾಯಿಂದ ಹೊರಬಿದ್ದಕೂಡಲೆ ಅವಳ ಕಾಲೊಳಗಿನ ಭೂಮಿಯು ಇಬ್ಭಾಗವಾಗಿ ಅದರ ಹೊಟ್ಟೆಯಲ್ಲಿ ಸೀತೆಯು ಅಡಗಿಹೋದಳು. ಈ ಚಮತ್ಕಾರವನ್ನು ನೋಡಿ ರಾಮನಿಗೆ ಉಂಟಾದ ದುಃಖವನ್ನು ವರ್ಣಿಸುವದು ಅಶಕ್ಯವೇ ಸರಿ. ಆ ಮೇಲೆ ರಾಮಚಂದ್ರನು ಕುಶಲ ವರನ್ನು ಸ್ವೀಕಾರಮಾಡಿ ಅವರನ್ನು ತನ್ನ ಹತ್ತರ ಇಟ್ಟುಕೊಂಡನು

ಪೃಥ್ವಿಯ ಹೊಟ್ಟೆಯಲ್ಲಿ ಸೀತೆಯು ಅದೃಶ್ಯಳಾದ ಕೆಲವು ವರ್ಷಗಳ ತರುವಾಯ ರಾಜಮಾತೆಯಾದ ಕೌಶಲ್ಯೆಯು ಸ್ವರ್ಗ

ವಾಸಿಯಾದಳು. ಅವಳ ಹಿಂದಿನಿಂದ ಸುಮಿತ್ರಾ ಮತ್ತು ಕೈಕೆಯಿ ಈ ಇಬ್ಬರೂ ಸ್ವರ್ಗವಾಸಿಯಾದರು. ಆಗ ರಾಮನು ಈ ಮೂರ್‍ರು ಮಂದಿ ತಾಯಂದಿರ ಉತ್ತರಕ್ರಿಯೆಯನ್ನು ತನ್ನ ವೈಭವಕ್ಕೆ ಅನುರೂಪವಾಗಿ ಮಾಡಿದನು. ಸೀತೆಯ ಸಂಗಡ ತಾನು ನಿಷ್ಠುರದಿಂದ ನಡೆದುಕೊಂಡದ್ದಕ್ಕಾಗಿ ರಾಮನಿಗೆ ಯಾವಾಗಲೂ ಪಶ್ಚಾತ್ತಾಪವಾಗ ಹತ್ತಿತು. ಆದರೆ ಪ್ರಜಾಜನರ ಸಂತೋಷಕ್ಕಾಗಿ ತಾನು ಆ ಪ್ರಕಾರ ಮಾಡುವ ಪ್ರಸಂಗ ಬಂತೆಂದು ತನ್ನ ಮನಸ್ಸಿಗೆ ಸಮಾಧಾನ ಹಚ್ಚಿಕೊಂಡನು. ಅವನು ರಾಜ್ಯಕಾರಭಾರವನ್ನು ಮಾಡುತ್ತಿದ್ದರೂ ಅವನಿಗೆ ಇಹಲೋಕದ ಜೀವಿತದ ಬಗ್ಗೆ ಮನಃಪೂರ್ವಕವಾಗಿ ಬೇಸರವು ಬಂದಿತ್ತು. ಒಂದು ದಿವಸ ರಾಮನು ಖಿನ್ನನಾಗಿ ಕುಳಿತಿರಲು, ಯಾವನೋ ಒಬ್ಬ ಯೋಗಿಯು ಅವನನ್ನು ಕಾಣಲಿಕ್ಕೆ ಬಂದು — "ನಾವಿಬ್ಬರೂ ಮಾತಾಡುತ್ತ ಕುಳಿತ ಸಮಯದಲ್ಲಿ ಯಾವನಾದರೂ ಮನುಷ್ಯನು ಬಂದಲ್ಲಿ ಅವನಿಗೆ ದೇಹಾಂತ ಶಿಕ್ಷೆಯನ್ನು ಕೊಡಲಿಕ್ಕೆ ನೀನು ಒಪ್ಪಿಕೊಂಡರೆ, ನಾನು ನಿನ್ನ ಸಂಗಡ ಏಕಾಂತ ಮಾತಾಡುವೆನು" ಎಂದು ಹೇಳಿದನು. ಆ ಪ್ರಕಾರ ರಾಮನು ಒಡಂಬಟ್ಟು, ಬಾಗಿಲದಲ್ಲಿ ಲಕ್ಷ್ಮಣನನ್ನು ಕುಳ್ಳಿರಿಸಿ, ಯೋಗಿಯ ಸಂಗಡ ಮಾತಾಡುತ್ತ ಕುಳಿತಿದ್ದನು. ಯೋಗಿಯು ರಾಮನಿಗೆ ಬ್ರಹ್ಮದೇವರ ಕೆಲವು ನಿರೂಪವನ್ನು ಹೇಳಲಿಕ್ಕೆ ಬಂದಿದ್ದನು. ಆದರೆ ಅವರಿಬ್ಬರ ಭಾಷಣವು ಮುಗಿಯುವದರೊಳಗಾಗಿ ದುರ್ವಾಸ ಋಷಿಯು ಬಾಗಿಲದ ಹತ್ತರ ಬಂದು ಲಕ್ಷ್ಮಣನಿಗೆ— "ನಾನು ಈಗಲೇ ರಾಮನನ್ನು ಕಾಣಲಿಕ್ಕೆ ಬಂದಿರುತ್ತೇನೆ. ನನ್ನನ್ನು ರಾಮನ ಬಳಿಗೆ ಕರೆದುಕೊಂಡುಹೋಗು. ತಡಮಾಡಿದರೆ ರಾಮನಿಗೆ ಶಾಪಕೊಟ್ಟು ರಾಮನ ರಾಜ್ಯವನ್ನು ನಾಶಮಾಡುವೆನು" ಎಂದು ನುಡಿದನು. ಅದನ್ನು

ಕೇಳಿ, ಲಕ್ಷ್ಮಣನು ಸ್ವಲ್ಪ ಹೊತ್ತು ವಿಚಾರಮಾಡಿ, ಕೋಪಿಷ್ಠ ದುರ್ವಾಸ ಋಷಿಯ ಶಾಪದಿಂದ ರಾಮನ ರಾಜ್ಯವು ನಾಶವಾಗುವದಕ್ಕಿಂತ ತನಗೆ ದೇಹಾಂತ ಶಿಕ್ಷೆಯಾಗುವದೇ ಲೇಸು ಎಂದು ನೆನೆಸಿ, ದುರ್ವಾಸನು ಬಂದ ವರ್ತಮಾನವನ್ನು ತಿಳುಹಿಸಲಿಕ್ಕೆ ರಾಮನ ಬಳಿಗೆ ಒಳಗೆಹೋದನು ಆಗ ರಾಮನಗೂಡ ಮಾತಾಡಲಿಕ್ಕೆ ಕುಳಿತಿದ್ದ ಯೋಗಿಯು ಲಕ್ಷ್ಮಣನನ್ನು ನೋಡಿದ ಕೂಡಲೆ ಮಾತಾಡುವದನ್ನು ನಡುವೇ ಬಿಟ್ಟುಕೊಟ್ಟು ಅಲ್ಲಿಂದ ಹೊರಟುಹೋದನು ತರುವಾಯ ರಾಮನು ದುರ್ವಾಸ ಋಷಿಯ ದರ್ಶನವನ್ನು ತೆಗೆದುಕೊಂಡು, ಅವನಿಗೆ ಬೇಕಾಗಿದ್ದ ಸುಗ್ರಾಸವನ್ನು ಯಥೇಚ್ಛವಾಗಿ ಉಣ್ಣಿಸಿ, ಅವನನ್ನು ತೃಪ್ತಬಡಿಸಿದನು. ಆಗ ಆವನು ರಾಮನಿಗೆ ಆಶೀರ್ವಾದ ಕೊಟ್ಟು ಹೊರಟುಹೋದನು

ಲಕ್ಷ್ಮಣನು ತನ್ನ ಆಜ್ಞೆಯನ್ನು ಮೀರಿ ದೇಹಾಂತ ಶಿಕ್ಷೆಗೆ ಪಾತ್ರನಾದನೆಂದು ನೋಡಿ ರಾಮನಿಗೆ ಬಹಳ ಖೇದವೆನಿಸಿತು. ಆದರೆ ಅವನಿಗೆ ಶಿಕ್ಷೆಯನ್ನು ಮಾಡದಿದ್ದರೆ ಅಧರ್ಮವಾಗುವದೆಂತಲೂ, ಅಧರ್ಮಮಾಡಿದರೆ ಪ್ರಜರ ಅಕಲ್ಯಾಣವಾಗುವದೆಂತಲೂ ವಿಚಾರಮಾಡಿ ರಾಮನು ಲಕ್ಷ್ಮಣನಿಗೆ ದೇಹತ್ಯಾಗಮಾಡುವದಕ್ಕೆಅಪ್ಪಣೆಮಾಡಿದನು. ಆಗ ಲಕ್ಷ್ಮಣನು ತತ್ಕಾಲವೇ ಶರಯೂ ನದಿಯ ತೀರಕ್ಕೆ ಹೋಗಿ, ಅಲ್ಲಿ ಪ್ರಾಯೋಪವೇಶವನ್ನು ಮಾಡಿ (ಅನ್ನನೀರುಗಳನ್ನು ತ್ಯಾಗಮಾಡಿ) ತನ್ನಪ್ರಾಣವನ್ನುಕೊಟ್ಟನು. ಈ ಪ್ರಕಾರ ಲಕ್ಷ್ಮಣನ ವಿಯೋಗವಾದ ನಂತರ ರಾಮನು ದಿನೇ ದಿನೇ ಹೆಚ್ಚು ಖಿನ್ನನೂ ಉದಾಸೀನನೂ ಆಗಲಿಕ್ಕೆ ಹತ್ತಿ, ಕಡೆಗೆ ತಾನೂ ದೇಹತ್ಯಾಗಮಾಡಬೇಕೆಂದು ನಿಶ್ಚಯಮಾಡಿ ತನ್ನ ಎಲ್ಲ ತಮ್ಮಂದಿರು, ಮಿತ್ರರು, ಆಪ್ತರು ಮೊದಲಾದವರನ್ನು ಕರೆಯಿಸಿ ಅವರ

ಮುಂದೆ ತನ್ನ ನಿಶ್ಚಯವನ್ನು ತಿಳುಹಿದನು. ಇದನ್ನು ಕೇಳಿದ ಕೂಡಲೆ ಅವರೆಲ್ಲರು—"ನೀವು ಹೋಗುವಲ್ಲಿ ನಮ್ಮನ್ನು ಕರೆದುಕೊಂಡು ಹೋಗಿರಿ" ಎಂದು ಹೇಳಿಕೊಂಡರು. ರಾಮನು ಅವರ ವಿನಂತಿಯನ್ನು ಮಾನ್ಯಮಾಡಲು ಅವರೆಲ್ಲರಿಗೆ ಬಹಳ ಆನಂದವಾಯಿತು. ಆಗ ಅವರೆಲ್ಲರು ತಮ್ಮ ತಮ್ಮ ಪರಿವಾರದ ಮತ್ತು ರಾಜ್ಯದ ವ್ಯವಸ್ಥೆಯನ್ನು ಮಾಡಿ ದೇಹತ್ಯಾಗಮಾಡಲಿಕ್ಕೆ ಉತ್ಸುಕರಾದರು.

ರಾಮನು ತನ್ನ ರಾಜ್ಯವನ್ನು ಲವಕುಶರಿಗೆ ಹಂಚಿಕೊಟ್ಟಂತೆ ಭರತಶತ್ರುಘ್ನರು ಸಹ ತಮ್ಮ ರಾಜ್ಯವನ್ನು ತಮ್ಮ ತಮ್ಮ ಮಕ್ಕಳಿಗೆ ಹಂಚಿಕೊಟ್ಟು ಸ್ವತಂತ್ರರಾದರು. ಸುಗ್ರೀವನು ಕಿಷ್ಕಿಂಧಾ ರಾಜ್ಯವನ್ನು ಅಂಗದನಿಗೆ ಕೊಟ್ಟು ತಾನೂ ಸ್ವತಂತ್ರನಾದನು. ವಿಭೀಷಣ, ಜಾಂಬವಂತ ಮತ್ತು ಹನುಮಂತ ಈ ತ್ರಿವರ್ಗರಿಗೆ ತನ್ನ ಸಂಗಡ ಬರಲಿಕ್ಕೆ ರಾಮನು ಅಪ್ಪಣೆಯನ್ನು ಕೊಡಲಿಲ್ಲ. ಸೂರ್ಯಚಂದ್ರರು ಜಗತ್ತಿನಲ್ಲಿರುವತನಕ ವಿಭೀಷಣನು ಲಂಕೆಯಲ್ಲಿ ರಾಜ್ಯಭಾರಮಾಡಬೇಕೆಂತಲೂ, ಜಾಂಬವಂತನು ಕಲಿಯುಗವು ಬರುವತನಕ ಇರಬೇಕೆಂತಲೂ, ಹನುಮಂತನು ರಾಮಕಥೆಯು ಭೂಲೋಕದಲ್ಲಿ ಇರುವ ಪರಿಯಂತರ ಇರತಕ್ಕದ್ದೆಂತಲೂ ಕಟ್ಟುಮಾಡಿ, ಉಳಿದವರನ್ನು ತನ್ನ ಸಂಗಡ ತೆಗೆದುಕೊಂಡು ಶರಯೂ ನದಿಗೆ ಹೋದನು. ಎಲ್ಲರು ಶರಯೂ ನದಿಗೆ ಹೋಗಿ ಮುಟ್ಟಿದ ನಂತರ ಆ ನದಿಯಲ್ಲಿ ಸ್ನಾನಮಾಡಿದರು. ರಾಮ, ಭರತ ಮತ್ತು ಶತ್ರುಘ್ನರು ಸ್ನಾನಮಾಡಿದ ಕೂಡಲೆ ಅವರು ವಿಷ್ಣುವಿನ ದೇಹದಲ್ಲಿ ಐಕ್ಯರಾದರು. ಇತರ ಜನರು ಸ್ನಾನಮಾಡಲಾಗಿ ಅವರು ದಿವ್ಯದೇಹವನ್ನು ಧಾರಣಮಾಡಿ, ತಮ್ಮನ್ನು ಕರೆಯಲಿಕ್ಕೆ ಬಂದಿದ್ದ ವಿಮಾನದಲ್ಲಿ ಕುಳಿತು ಸ್ವರ್ಗಲೋಕಕ್ಕೆ ಹೊರಟು ಹೋದರು.

# ಉಪಸಂಹಾರ.

ಈ ರಾಮಾಯಣದೊಳಗಿನ ಮುಖ್ಯ ಜನರ ಗುಣದೋಷಗಳನ್ನು ಇಲ್ಲಿ ಬಾಲಕರಸಲುವಾಗಿ ಸಂಕ್ಷಿಪ್ತವಾಗಿ ತಿಳಿಸುತ್ತೇವೆ ಅವುಗಳನ್ನು ಅವರು ಲಕ್ಷ್ಯಪೂರ್ವಕವಾಗಿ ಓದಿ ಮನನಮಾಡತಕ್ಕದ್ದು

## ರಾಮ.

ರಾಮನು ಬಹಳ ಸತ್ಯವಂತನಿದ್ದನು ಅವನು ತಾನು ಕೊಟ್ಟ ವಚನವನ್ನು ಎಂದೂ ತಿರುಗಿಸುತ್ತಿದ್ದಿಲ್ಲ. ಆದುದರಿಂದ ಸತ್ಯವಚನದ ಮನುಷ್ಯರಿಗೆ ರಾಮವಚನದವರೆಂದೆನ್ನುವರು ರಾಮನು ಗುರುಹಿರಿಯರ ಮತ್ತು ತಾಯಿತಂದೆಗಳ ಸಂಗಡ ಬಹಳ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನು. ಅವರು ಹೇಳಿದ ಮಾತನ್ನು ಅವನು ಎಂದೂ ಮೀರುತ್ತಿದ್ದಿಲ್ಲ. ರಾಮಚಂದ್ರನು ತನ್ನ ತಮ್ಮಂದಿರ ಮೇಲೆ ಬಹಳ ಪ್ರೀತಿಮಾಡುತ್ತಿದ್ದನು ಅವನು ತನ್ನ ಹಡೆದ ತಾಯಿಯಾದ ಕೌಸಲ್ಯೆಯು ಮತ್ತು ಮಲತಾಯಿಗಳಾದ ಸುಮಿತ್ರೆ ಮತ್ತು ಕೈಕಯಿ ಇವರ ನಡುವೆ ಎಂದೂ ಭೇದಮಾಡಲಿಲ್ಲ. ರಾಮನು ತನ್ನ ಪತ್ನಿಯ ಮೇಲೆ ಬಹಳ ಪ್ರೀತಿಮಾಡುವವನೂ, ಏಕಪತ್ನಿಸ್ಥನೂ ಆಗಿದ್ದನು ಆದರೆ ಅವನು ಎಂದಿಗೂ ವಿಷಯ ಲಂಪಟನಾಗಿರಲಿಲ್ಲ. ಅವನು ಜನಾಪವಾದಕ್ಕಾಗಿ ಬಹಳ ಅಂಜಿ ನಡೆಯುತ್ತಿದ್ದನು ಅವನು ದೀನರ ದುಃಖವನ್ನು ಕಳೆಯುವದಕ್ಕಾಗಿ ತನ್ನ ಸ್ವಂತ ಸುಖವನ್ನು ತ್ಯಾಗಮಾಡುತ್ತಿದ್ದನು. ರಾಮನು ತನಗೆ ಎರಡನೆಯವರು ಕೇಡು ಮಾಡಿದರೂ ತಾ
ರಿಗೆ ಎಂದೂ ಕೇಡನ್ನು ಮಾಡಲಿಲ್ಲ. ರಾಮನು ಬಹಳ ಶ

ಸಂಪನ್ನನಿದ್ದನು. ಅವನಲ್ಲಿ ಗರ್ವದ ಲವಲೇಶವು ಸಹ ಇದ್ದಿಲ್ಲ. ಅವನು ಯಾವಾಗಲು ಆನಂದದಿಂದ ಇರುತ್ತಿದ್ದನು ಅವನಿಗೆ ಅಧರ್ಮವು ಸ್ವಪ್ನದಲ್ಲಿ ಸಹ ಗೊತ್ತಿದ್ದಿಲ್ಲ. ರಾಮನಂತೆ ಸತ್ಯದಿಂದಲೂ ಸದಾಚರಣದಿಂದಲೂ ನಡೆಯುವ ಬಾಲಕರಿಗೆ ತಪ್ಪದೆ ಕಲ್ಯಾಣವಾಗುವ್ರದು.

## ಲಕ್ಷ್ಮಣ.

ರಾಮನಂಥ ಗುಣಗಳು ಲಕ್ಷ್ಮಣನಲ್ಲಿ ಸಹ ಇದ್ದವು. ಲಕ್ಷ್ಮಣನಲ್ಲಿಯ ಬಂಧುಪ್ರೀತಿಯು ಅವನ ವರ್ತನದಲ್ಲಿ ಒಡೆದು ಕಾಣಿಸುವಂತೆ ಇತ್ತು. ಬಾಲಕರು ತಮ್ಮ ಅಣ್ಣತಮ್ಮಂದಿರ ಮೇಲೆ ಪ್ರೀತಿಮಾಡಿ ಅವರಿಗೋಸ್ಕರ ಬೇಕಾದ ಸಂಕಟಗಳನ್ನು ಸಹಿಸುವ ಗುಣವನ್ನು ಲಕ್ಷ್ಮಣನಿಂದ ಅವಶ್ಯವಾಗಿ ಕಲಿಯತಕ್ಕದ್ದು. ರಾಮಚಂದ್ರನು ಏಕಾಂತದಲ್ಲಿ ಒಬ್ಬ ಜಟಾಧಾರಿ ಯೋಗಿಯ ಸಂಗಡ ಮಾತಾಡುತ್ತ ಕುಳಿತಾಗ್ಗೆ ಲಕ್ಷ್ಮಣನು ದುರ್ವಾಸ ಋಷಿಯ ನಿರೂಪವನ್ನು ತಿಳಿಸಲಿಕ್ಕೆ ಧೈರ್ಯದಿಂದ ಒಳಗೆ ಹೋಗಿ, ದೇಹಾಂತ ಶಿಕ್ಷೆಯನ್ನು ಅನುಭೋಗಿಸಿದ ಕಾರಣವು ತನ್ನ ಅಣ್ಣನ ಮತ್ತು ಅಣ್ಣನ ರಾಜ್ಯದ ಮೇಲಿನ ಪ್ರೀತಿಯೇ ಎಂಬುವದು ಸ್ಪಷ್ಟವಾಗಿರುತ್ತದ. ಲಕ್ಷ್ಮಣನು ತನ್ನ ಅಣ್ಣನ ಸುಖವೇ ತನ್ನ ಸುಖವೆಂದು ತಿಳಿದು, ಅವನ ಸಂಗಡ ಅರಣ್ಯವಾಸಕ್ಕೆ ಹೋಗಿ, ಯಾವತ್ತು ತರದ ಸಂಕಟಗಳನ್ನು ಸಹಿಸಿಕೊಂಡನು. ಬಂಧುಪ್ರೇಮವನ್ನು ಏಕನಿಷ್ಠೆಯಿಂದ ಮಾಡಿ, ತನ್ನ ಸುಖ ಮತ್ತು ಐಶ್ವರ್ಯಗಳನ್ನು—

ಜೀವವನ್ನು ಸಹ ಅಣ್ಣನಿಗೆ ಅರ್ಪಣಮಾಡಿ ಪುಣ್ಯಶಾಲಿ ಲಕ್ಷ್ಮಣನನ್ನು ಎಷ್ಟೆಂತ ಹೊಗಳಬೇಕು?

## ಭರತ.

ಇವನ ಬಂಧುಪ್ರೀತಿಯಾದರೂ ವಿಶೇಷ ಶ್ಲಾಘನೀಯವಿತ್ತು. ಇವನ ತಾಯಿಯಾದ ದುಷ್ಟ ಕೈಕೆಯಿಯು ಇವನಿಗೆ ರಾಜ್ಯ ಸಿಂಹಾಸನವು ದೊರಕಬೇಕೆಂತಲೂ, ರಾಮಚಂದ್ರನನ್ನು ವನವಾಸಕ್ಕೆ ಕಳುಹಿಸಬೇಕಂತಲೂ ವೃದ್ಧದಶರಥರಾಜನಿಂದ ವಚನವನ್ನು ತೆಗೆದು ಕೊಂಡಳು. ಆದರೂ ಇವನು ಆ ಸಿಂಹಾಸನವನ್ನು ತಿರಸ್ಕರಿಸಿ, ಯೋಗಿಯಂತೆ ವಲ್ಕಲಗಳನ್ನು ಧಾರಣಮಾಡಿ, ರಾಮಚಂದ್ರನು ತಂದೆಯ ವಚನದ ಪ್ರಕಾರ ಅರಣ್ಯವಾಸವನ್ನು ಮುಗಿಸಿಕೊಂಡು ರಾಜ್ಯಕ್ಕೆ ಮರಳಿ ಬರುವತನಕ ರಾಮನ ಪಾದುಕಗಳನ್ನು ಸಿಂಹಾಸನದ ಮೇಲಿರಿಸಿ, ಅವನ ಹೆಸರಿನಿಂದಲೇ ಅಯೋಧ್ಯೆಯನ್ನು ಆಳಿದನು. ಈ ಬಂಧುಪ್ರೀತಿಯು ಸಹ ಸಾಮಾನ್ಯವೇ?

## ಸೀತಾ.

ಸೀತೆಯಂಥ ಪತಿವ್ರತಾಶಿರೋಮಣಿಯು ಜಗತ್ತಿನಲ್ಲಿ ದೊರಕುವದು ದುರ್ಲಭವು. ರಾಮಚಂದ್ರನು ಅರಣ್ಯಕ್ಕೆ ಹೊರಟ ಕಾಲದಲ್ಲಿ ಸೀತೆಯು ಚಿಕ್ಕವಳಿದ್ದಳು. ಆದರೂ ತಾನು ತನ್ನ ಪತಿಯನ್ನಗಲಿ ಇರುವದು ಧರ್ಮವಲ್ಲೆಂದು ತಿಳಿದು, ಅವನ ಸಂಗಡ ಅರಣ್ಯಕ್ಕೆ ಹೋಗಿ, ಯಾವಾಗಲು ಅವನ ಶುಶ್ರೂಷೆಯನ್ನು ಮಾಡುತ್ತ ಆನಂದದಿಂದ ಇರುತ್ತಿದ್ದಳು. ಅವಳು ತನ್ನ ಪತಿಯೇ ತನ್ನ ದೈವತವು ಎಂಬದಾಗಿ ತಿಳಿದುಕೊಂಡು, ತನ್ನ ಸೌಖ್ಯವನ್ನು ತಿಲಪ್ರಾಯವಾದರೂ ಮನಸ್ಸಿನಲ್ಲಿ ತಾರದೆ, ಅರಣ್ಯವಾಸದಲ್ಲಿ ಎಲ್ಲ ತರದ ಕಷ್ಟಗಳನ್ನು ಅನುಭೋಗಿಸಿದಳು. ರಾವಣನು ಅವಳನ್ನು ಬಲಾ-

ತ್ಕಾರದಿಂದ ತೆಗೆದುಕೊಂಡು ಹೋಗಿ, ಅವಳನ್ನು ವಶಮಾಡಿಕೊ . ಬೇಕೆಂದು ಅವಳಿಗೆ ತರತರದ ಆಶೆಗಳನ್ನು ತೋರಿಸಿದನು. ಅವುಗಳನ್ನೆಲ್ಲ ಅವಳು ತುಚ್ಛೀಕರಿಸಲಾಗಿ ರಾವಣನು ಅವಳನ್ನು ಸೆ ಯಲ್ಲಿಟ್ಟು, ಅವಳಿಗೆ ಕೊಲ್ಲುವ ಹೆದರಿಕೆಯನ್ನು ಸಹ ಹಾಕಿದನ ನೆ ಆದರೂ ಅವಳು ಕಡೆತನಕ ತನ್ನ ಪತಿವ್ರತಾಧರ್ಮವನ್ನು ಬಿಡಲಿಲ್ಲ. ಅವಳ ಶುದ್ಧಾಚರಣವು ಅದ್ವಿತೀಯವಾಗಿತ್ತು. ಆದುದರಿಂದ ಅವಳು ಎಲ್ಲರಿಗೂ ಪೂಜ್ಯಳಾಗಿರುವಳು. ಯಾವತ್ತು ಬಾಲಿಕೆಯರು ಸೀತೆಯಂತೆ ಪತಿವ್ರತಾಧರ್ಮನಿರತರಾಗಿ ಇರತಕ್ಕದ್ದು.

## ಹನುಮಂತ.

ಹನುಮಂತನಂಥ ಸ್ವಾಮಿಭಕ್ತಿಪರಾಯಣರು ಎಲ್ಲಿಯೂ ಸಿಗಲಾರರು. ಹನುಮಂತನು ರಾಮಚಂದ್ರನ ಸೇವೆಯನ್ನು ಮೊದಲಿನಿಂದ ಕಡೆತನಕ ಏಕನಿಷ್ಠೆಯಿಂದ ಮಾಡಿದನು ಸೇವಾಧರ್ಮವನ್ನು ಮಾಡುವವರು ಹನುಮಂತನ ಉದಾಹರಣವನ್ನು ಅನುಕರಣ ಮಾಡಿದರೆ, ಅವರಿಗೆ ನಿರಂತರ ಕಲ್ಯಾಣವಾಗುವದು ತಮ್ಮ ಒಡೆಯರ ಕಲ್ಯಾಣವೇ ತಮ್ಮದೆಂದು ತಮ್ಮ ಒಡೆಯರ ಸೇವೆಯನ್ನು ಆಲಸ್ಯ ಅಥವಾ ಅಜಾಗ್ರತೆಯಿಲ್ಲದೆ ಮಾಡುವವರು ಬಹಳ ಸಾತ್ವಿಕರೆನಿಸಿಕೊಳ್ಳುವರು. ಅವರು ಎಂಥ ಬಡಸ್ಥಿತಿಯಲ್ಲಿದ್ದರೂ ಅವರ ಮನಸ್ಸಿನ ಸಮಾಧಾನವು ಅವರಿಗೆ ಅವರ ಸದ್ಗುಣದ ಪ್ರತಿಫಲವಾಗಿ ದೊರಕುವದು. ಹಾಗೂ ಅವರಿಗೆ ಎಲ್ಲ ರೀತಿಯ ಶ್ರೇಯಸ್ಸು ದೊರಕುವದು.

## ರಾವಣ.

ಐಶ್ವರ್ಯ ಮತ್ತು ಅಧಿಕಾರವುಳ್ಳವರು ಗರ್ವದಿಂದ ನಡೆದಲ್ಲಿ ನುಗೆ ವಿನಾಶವುಂಟಾಗುವದೆಂಬುವದನ್ನು ರಾವಣನ ಚರಿತ್ರದಿಂದ ಲಿಯತಕ್ಕದ್ದು. ಪರದ್ರವ್ಯವನ್ನೂ ಪರಸ್ತ್ರೀಯನ್ನೂ ಅಪೇಕ್ಷಿಸು ವವರು ತಮಗೆ ರಾವಣನಂತೆ ಯಾವಾಗಲೂ ಕೇಡು ಉಂಟಾಗುವ ದೆಂದು ಚೆನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು. ಹಾಗ ಎರಡನೆಯವರ ವಸ್ತುವಿಗೆ ಆಶೆಮಾಡಿ, ಎರಡನೆಯವರ ಸಂಗಡ ದ್ವೇಷಮಾಡಿ ಕೊಳ್ಳುವ ದುರಾಚಾರಿಗಳ ಪರಿಣಾಮವು ಯಾವಾಗಲು ಕೆಡಕು ಆಗುವದೆಂದು ನಿಶ್ಚಯವಾಗಿ ತಿಳಿದುಕೊಳ್ಳತಕ್ಕದ್ದು.

---

## ವಿಭೀಷಣ.

ವಿಭೀಷಣನು ರಾವಣನ ತಮ್ಮನಾದರೂ ಬಹಳ ದೇವಭಕ್ತನೂ, ಸದಾಚರಣಿಯೂ ಇದ್ದನು. ರಾವಣನು ರಾಮಚಂದ್ರನ ಪತ್ನಿ ಯಾದ ಸೀತೆಯನ್ನು ಅಪಹಾರಮಾಡಿದ ಸಂಗತಿಯೂ, ರಾಮನ ಸಂಗಡ ನಿಷ್ಕಾರಣದಿಂದ ಯುದ್ಧಮಾಡಲಿಕ್ಕೆ ಆಲೋಚಿಸಿದ ಸಂಗತಿ ಯೂ ವಿಭೀಷಣನ ಮನಸ್ಸಿಗೆ ಎಷ್ಟುಮಾತ್ರಕ್ಕೂ ಬರಲಿಲ್ಲ. ವಿಭೀಷಣನು ತನ್ನ ಅಣ್ಣನಾದ ರಾವಣನಿಗೆ—“ನೀನು ರಾಮನ ಹೆಂಡತಿಯಾದ ಸೀತಾದೇವಿಯನ್ನು ರಾಮನಿಗೆ ಒಪ್ಪಿಸಿ ಅವನ ಸಂಗಡ ಸ್ನೇಹದಿಂದ ಇರು” ಎಂದು ನ್ಯಾಯವಾದ ಉಪದೇಶವನ್ನು ಮಾಡಿದನು. ಇದಕ್ಕಾಗಿ ರಾವಣನು ಅವನಿಗೆ –“ನೀನು ನಮ್ಮ ರಾಕ್ಷಸಕುಲದಲ್ಲಿ ಹುಟ್ಟಿರುವದು ನಾಚಿಕೆಗೇಡಿತನವು” ಎಂದು ಬಹಳವಾಗ ಹಳಿದನು. ಆದರೂ ವಿಭೀಷಣನು ರಾವಣನ ಮಾತಿಗೆ

ಒಲಿಯದೆ, ರಾವಣನ ವಿರುದ್ಧವಾಗಿ ರಾಮನಿಗೆ ಸಹಾಯಮಾಡಿದನು. ಒಡಹುಟ್ಟಿದ ಅಣ್ಣನನ್ನು ಸಹ ಲಕ್ಷಿಸದೆ, ಧರ್ಮದಿಂದಲೂ ನ್ಯಾಯದಿಂದಲೂ ವರ್ತಿಸಿ, ವಿಭೀಷಣನು ತನ್ನ ಅಣ್ಣನ ನಂತರ ಲಂಕಾಧಿಪತಿಯಾದನು. ವಿಭೀಷಣನು ರಾಕ್ಷಸಕುಲದಲ್ಲಿ ಜನ್ಮವನ್ನು ಪಡೆದರೂ ತನ್ನ ಸದ್ಗುಣಗಳಿಂದ ಬಹಳ ಲೋಕಪ್ರಿಯನಾಗಿದ್ದನು ಆದುದರಿಂದ ಜನರ ಕೀರ್ತಿಯು ಅವರ ಉಚ್ಚನೀಚ ಜಾತಿಯ ಮೇಲೆ ಅಥವಾ ಜನ್ಮದ ಮೇಲೆ ಅವಲಂಬಿಸಿರದೆ, ಅವರ ಗುಣಗಳ ಮೇಲೆ ಅವಲಂಬಿಸಿರುವದೆಂದು ಬಾಲಕರು ಚೆನ್ನಾಗಿ ನೆನಪಿನಲ್ಲಿಡತಕ್ಕದ್ದು.



# ಶ್ರೀ. ಹೊನ್ನಾಪುರಮಠ, ವಕೀಲ, ಧಾರವಾಡ.

ಇವರಿಂದ ರಚಿತವಾಗಿ ಮುದ್ರಿಸಲ್ಪಟ್ಟ ಪುಸ್ತಕಗಳು.

**(ನೈತಿಕ-ಧಾರ್ಮಿಕ— ಮನೋರಂಜಕ ಪುಸ್ತಕಗಳು)**

| | | | | |
|---|---|---|---|---|
| ೧. | ಶ್ರೀ ರಾಮದಾಸಸ್ವಾಮಿಗಳ ಚರಿತ್ರ | ಬೆಲೆ | ೧ | ರೂಪಾಯಿ |
| ೨ | ನೀತಿಮಂಜರಿ (ಸಚಿತ್ರ) | " | ೧೨ | ಆಣೆ |
| ೩ | ಬಾಲಭಾರತ (ಸಚಿತ್ರ) | " | ೧೦ | " |
| ೪ | ಬಾಲರಾಮಾಯಣ (ಸಚಿತ್ರ) | " | ೮ | " |
| ೫ | ಬಾಲಭಾಗವತ (ಸಚಿತ್ರ) | " | ೮ | " |
| ೬ | ಸುದಾಮ ಚರಿತ್ರ (ಸಚಿತ್ರ) | " | ೪ | " |
| ೭ | ಪ್ರಹ್ಲಾದ ಚರಿತ್ರ (ಸಚಿತ್ರ) | " | ೬ | " |
| ೮ | ಧ್ರುವ ಚರಿತ್ರ (ಸಚಿತ್ರ) | " | ೪ | " |
| ೯ | ಚಿಲ್ಲಾಳ ಚರಿತ್ರ (ಸಚಿತ್ರ) | " | ೨ | " |
| ೧೦ | ಅದ್ಭುತಪ್ರೇಮ (ಐತಿಹಾಸಿಕ ಕಾದಂಬರಿ) | " | ೧೨ | " |
| ೧೧ | ತ್ರಾಟಿಕಾನಾಟಕ (ಮೊಂಡಗಂಡ ತುಂಟಹೆಂಡತಿ ನಾಟಕ) | | ೧೨ | " |
| ೧೨ | ಶ್ರೀ ಶಿವಲೀಲಾಮೃತ ಕಥೆಗಳು (ಸಚಿತ್ರ) | ಬೆಲೆ | ೧೦ | " |
| ೧೩ | ವೀರಶೈವ ಸಂಕ್ಷಿಪ್ತ ಶಿವಪೂಜಾವಿಧಿ (ಲಿಂಗಧಾರಣ ವಿಧಾನ ಸಹಿತ) | ಬೆಲೆ | [illegible] | " |
| ೧೪. | ಶ್ರೀ ರಾಮಕೃಷ್ಣ ಪರಮಹಂಸರ ಸತ್ಕಥೆಗಳು | " | ೧೦ | " |
| ೧೫ | ಸಿಂಧಾಪ್ರಭಾವ ನಾಟಕ (ಮುದುಕ ಗಂಡ ಚಿಕ್ಕ ಹೆಂಡತಿ ನಾಟಕ) | " | ೧೨ | " |
| ೧೬. | ಶ್ರೀ ಬಸವೇಶ್ವರ ಚರಿತ್ರ (ವಚನಗಳು ಸಹಿತ) | " | ೬ | " |
| ೧೭ | ಶ್ರೀ ಕೃಷ್ಣಚರಿತ್ರ (ಸಚಿತ್ರ) (ಮುದ್ರಣದಲ್ಲಿ) | " | ೧ | ರೂಪಾಯಿ. |

**ಸೂಚನೆ:** — ವ್ಯಾಪಾರಸ್ಥರಿಗೂ ಶಾಲಾ ಗುರುಗಳಿಗೂ ಯೋಗ್ಯ ಡಿಸ್ಕೌಂಟು ಕೊಡುವದರಲ್ಲಿ ಬರುವದು. ಆದರೆ ಬರುವ ನಗದು ಹಣವನ್ನು ಕಳಿಸಬೇಕು ಯಾರಿಗೂ ಉದ್ರಿಯು ಸಿಗಲಿಕ್ಕಿಲ್ಲ.

**ಮ್ಯಾನೇಜರ "ಚಂದ್ರೋದಯ ಪ್ರೆಸ್", ಧಾರವಾಡ**